# ಬ್ಯಾಂಕಿಂಗ್ ಪ್ರಪಂಚ

ಸಂಪಾದಕರು

ಎಚ್ಚೆಸ್ಕೆ

ಜೂನ್

೧೯೮೧

೩

ಸಮನ್ವಯ ಸಮಿತಿ (ರಿ.)
(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ
ಬೆಂಗಳೂರು 560 002

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ಅರ್ಧವಾರ್ಷಿಕ

# ಸಮನ್ವಯ ಸಮಿತಿ

**(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)**

ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ 1960ರ ಪ್ರಕಾರ ನೋಂದಾಯಿಸಿದೆ.
ಕ್ರಮಸಂಖ್ಯೆ 170/80-81



### ಉದ್ದೇಶಗಳು

ಕರ್ನಾಟಕದಲ್ಲಿರುವ ಭಾರತೀಯ ಸ್ಟೇಟ್ ಬ್ಯಾಂಕಿನ ಶಾಖೆಗಳಲ್ಲಿ ಕನ್ನಡ ಸಂಘಗಳ ಸ್ಥಾಪನೆಗೆ ನೆರವಾಗುವುದು, ತನ್ಮೂಲಕ ಕನ್ನಡ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ತೀವ್ರಗೊಳಿಸುವುದು

ಬ್ಯಾಂಕಿಂಗ್ ವಿಷಯದ ಬಗ್ಗೆ ಒಂದು ನಿಯತಕಾಲಿಕವನ್ನು ಪ್ರಕಾಶಿಸುವುದು ಮತ್ತು ತತ್ಸಂಬಂಧಿಯಾದ ವಿಷಯಗಳ ಬಗ್ಗೆ ನಿಘಂಟು ಮತ್ತು ಇತರ ಪುಸ್ತಕಗಳನ್ನು ತಜ್ಞರಿಂದ ಬರೆಯಿಸಿ ಪ್ರಕಟಿಸುವುದು

ಶಾಖಾ ಕನ್ನಡ ಸಂಘಗಳು ಕೈಗೊಳ್ಳಬಹುದಾದ ಕಾರ್ಯಕ್ರಮಗಳ ಬಗ್ಗೆ ಸಲಹೆ, ಸಹಕಾರ ಮತ್ತು ಸಹಾಯ ನೀಡುವುದು

ಕನ್ನಡ ಸಂಘಗಳಿರುವ ಶಾಖೆಗಳಲ್ಲಿ ಕನ್ನಡ ಸಾಹಿತ್ಯ, ಕಲೆ, ಜನಪದ ಇತ್ಯಾದಿಗಳಿಗೆ ಸಂಬಂಧಿಸಿದ ವಿಷಯಗಳ ಬಗ್ಗೆ ವಿಚಾರಗೋಷ್ಠಿ, ಉಪನ್ಯಾಸ ಇತ್ಯಾದಿಗಳನ್ನು ಏರ್ಪಡಿಸುವುದು ಮತ್ತು ಇನ್ನಿತರ ಪೂರಕ ಚಟುವಟಿಕೆಗಳನ್ನು ಸಮಿತಿಯು ನೇರವಾಗಿಯೂ, ದತ್ತಿನಿಧಿಯನ್ನು ಸ್ಥಾಪಿಸುವುದರ ಮೂಲಕವೂ ಮತ್ತು ಸಮಾನ ಉದ್ದೇಶಗಳುಳ್ಳ ಇತರ ಸಂಘಸಂಸ್ಥೆಗಳೊಂದಿಗೆ ರೂಪಿಸಿಯೂ ನಿರ್ವಹಿಸುವುದು.

---

### ೧೯೮೧ನೇ ಸಾಲಿನ ಪದಾಧಿಕಾರಿಗಳು

ಅಧ್ಯಕ್ಷ :
ಶ್ರೀ ಎನ್. ಎಸ್. ಶ್ರೀಧರರಾಮ್

ಪ್ರಧಾನ ಕಾರ್ಯದರ್ಶಿಗಳು :
ಪಾ. ರಾಜಗೋಪಾಲ, ಚೋ. ನಂಜಪ್ಪ

ಖಜಾಂಚಿ :
ಎಚ್. ಸುರೇಶ್ ಶೈಣೈ

ಉಪಾಧ್ಯಕ್ಷರು :
ಶ್ರೀ ಐ. ಪ್ರಕಾಶ್, ಶ್ರೀ ಮೇ. ಕೃ. ಅನಂತಸ್ವಾಮಿ

ಸಹಕಾರ್ಯದರ್ಶಿಗಳು :
ಎಲ್. ಉಮಾಶಂಕರ್, ಚಿ. ರಾ. ವೇಣುಗೋಪಾಲ

ಆಂತರಿಕ ಲೆಕ್ಕ ಪರಿಶೋಧಕ :
ಕೆ. ಎನ್. ಜಯರಾಮ

# ಬ್ಯಾಂಕಿಂಗ್ ಪ್ರಪಂಚ

ಹಣ ಬ್ಯಾಂಕಿಂಗ್ ವಿಚಾರಗಳಿಗೆ
ಮೀಸಲಾದ ಅರ್ಧವಾರ್ಷಿಕ

ಸಂಪುಟ ೨ ಸಂಚಿಕೆ ೧
ಜೂನ್ ೧೯೮೧

ಸಂಪಾದಕ
ಎಚ್ಚೆಸ್ಕೆ

**ಸಲಹಾ ಮಂಡಲಿ**
ಡಾ. ಡಿ. ಎಂ. ನಂಜುಂಡಪ್ಪ
ಡಾ. ಕೆ. ಪುಟ್ಟಸ್ವಾಮಯ್ಯ
ಸಿ. ಎಸ್. ಶೇಷಾದ್ರಿ, ಐ.ಎ.ಎಸ್. (ನಿವೃತ್ತ)
ಸೂ. ಸುಬ್ರಹ್ಮಣ್ಯಂ
ಆರ್. ಎನ್. ಗೋಡ್ಬೋಲೆ
ಡಾ. ಎಂ. ಮಾದಯ್ಯ

ಶೀರ್ಷಿಕೆ ವಿನ್ಯಾಸ—ಗಿರಿಧರ ಖಾಸನೀಸ

**ಸಮನ್ವಯ ಸಮಿತಿ (ರಿ.)**
(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ
ಬೆಂಗಳೂರು 560 002

ವಾರ್ಷಿಕ ಚಂದಾ ರೂ. ೫
ಆಜೀವ ಚಂದಾ ರೂ. ೧೦೦
ಬಿಡಿ ಪ್ರತಿ ರೂ. ೩

ಆರು ವರ್ಷಗಳಲ್ಲಿ ನಿಮ್ಮ ಉಳಿತಾಯ ಇಮ್ಮಡಿ

# ಅಂಚೆ ಕಛೇರಿಯ

## ರಾಷ್ಟ್ರೀಯ ಉಳಿತಾಯ ಪತ್ರಗಳು

**6ನೇ ಮಾಲಿಕೆ**

ರೂ. 100.00 ಆರು ವರ್ಷಗಳ ನಂತರ ರೂ. 201.50 ಆಗುತ್ತದೆ.

**7ನೇ ಮಾಲಿಕೆ**

ಸಾಲಿಯಾನ ಶೇಕಡಾ 12ರಂತೆ ಬಡ್ಡಿಯನ್ನು ಆರು ತಿಂಗಳಿಗೊಮ್ಮೆ ಪಾವತಿ ಮಾಡಲಾಗುತ್ತದೆ.

**ಹೆಚ್ಚಿನ ವಿವರಗಳಿಗೆ ಹತ್ತಿರದ ಅಂಚೆ ಕಛೇರಿಯಲ್ಲಿ ವಿಚಾರಿಸಿರಿ**

ಸಣ್ಣ ಉಳಿತಾಯದ ನಿರ್ದೇಶನಾಲಯ

14/3ಅ, ನೃಪತುಂಗ ರಸ್ತೆ, ಬೆಂಗಳೂರು-560 002

ದೂರವಾಣಿ : 26470 ಅಥವಾ 72785

# ಬ್ಯಾಂಕಿಂಗ್ ಪ್ರಪಂಚ

## ಪರಿವಿಡಿ




ಈ ಪತ್ರಿಕೆಯಲ್ಲಿ ಪ್ರಕಟವಾದ ಲೇಖನಗಳಲ್ಲಿಯ ಅಭಿಪ್ರಾಯಗಳು ಆಯಾ ಲೇಖಕರವೇ. ಅವು ಸಂಪಾದಕರವು ಅಥವಾ ಸಮನ್ವಯ ಸಮಿತಿಯವು ಆಗಿರಬೇಕಾದ್ದಿಲ್ಲ.

# ಬ್ಯಾಂಕಿಂಗ್ ಪ್ರಪಂಚ

---

## ಈ ಸಂಚಿಕೆಯ ಲೇಖನದಾರರು

**ಎನ್. ಜಿ. ಚಂದ್ರಶೇಖರಯ್ಯ,** 1138, 18ನೆಯ ಅಡ್ಡ ರಸ್ತೆ, ಬನಶಂಕರಿ 2ನೆಯ ಹಂತ, ಬೆಂಗಳೂರು 560 070

**ಟಿ. ಎಂ. ಪಂಡಿತ,** ವಾಣಿಜ್ಯ ಮತ್ತು ಬ್ಯಾಂಕಿಂಗ್ ಅಧ್ಯಾಪಕ, ಡಾ. ಎ. ವಿ. ಬಾಳಿಗಾ ವಾಣಿಜ್ಯ ಕಾಲೇಜು, ಕುಮಟಾ 581 343

**ಬಿ. ಎಂ. ಶಿವಸ್ವಾಮಿ,** ಸದಸ್ಯ, ಕನ್ನಡ ಸಂಘ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ, ಬೆಂಗಳೂರು 560 002

**ಮೇ. ಕೃ. ಅನಂತಸ್ವಾಮಿ,** ವ್ಯವಸ್ಥಾಪಕ, ಭಾರತೀಯ ಸ್ಟೇಟ್ ಬ್ಯಾಂಕ್, ಸಿಂದಗಿ 586 128

**ಎಸ್. ಶ್ರೀಧರ್,** ವ್ಯವಸ್ಥಾಪಕ, ವೈಯಕ್ತಿಕ ಬ್ಯಾಂಕಿಂಗ್ ವಿಭಾಗ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ, ಬೆಂಗಳೂರು 560 002

**ಫಕೀರ್ ಮುಹಮ್ಮದ್ ಕಟ್ಪಾಡಿ,** ಕಾರ್ಯದರ್ಶಿ, ಕನ್ನಡ ಸಾಹಿತ್ಯ ಸಂಘ, ಭಾರತೀಯ ಸ್ಟೇಟ್ ಬ್ಯಾಂಕ್, ಉಡುಪಿ 576 101, ತರುಣ ಕತೆಗಾರರು.

**ಪುಷ್ಪಲತಾ,** ಸದಸ್ಯೆ, ಕನ್ನಡ ಸಾಹಿತ್ಯ ಸಂಘ, ಭಾರತೀಯ ಸ್ಟೇಟ್ ಬ್ಯಾಂಕ್, ಉಡುಪಿ 576 101

**ಎಂ. ಆರ್. ಮುಕುಂದ ಕುಮಾರ್‌ಜೀ,** ಸದಸ್ಯ, ಕನ್ನಡ ಸಂಘ, ಭಾರತೀಯ ಸ್ಟೇಟ್ ಬ್ಯಾಂಕ್ ಬೆಂಗಳೂರು ನಗರ ಶಾಖೆ, ಬೆಂಗಳೂರು 560 002

**ಬಿ. ಎಸ್. ಚಂದ್ರಶೇಖರ,** ತರಬೇತಿಯಲ್ಲಿರುವ ಅಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಕುಮಾರ ಪಾರ್ಕ್ ಶಾಖೆ, ಬೆಂಗಳೂರು 560 020.

**ಕೆ. ಪಿ. ರಾವ್,** ನ್ಯಾಯವಾದಿ, 'ನ್ಯಾಯಸುಧಾ' ಕನ್ನಡ ಮಾಸಪತ್ರಿಕೆಯ ಸಂಪಾದಕ

**ಎನ್. ಪಿ. ಕುಮಾರ್,** ಕೋಶಾಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಎ.ಎಸ್.ಸಿ. ಸೆಂಟರ್ ಸೌತ್ ಶಾಖೆ, ಬೆಂಗಳೂರು 560 007

**ಒಡೆಯರ್ ಡಿ. ಹೆಗ್ಗಡೆ,** ಅರ್ಥಶಾಸ್ತ್ರ ಅಧ್ಯಾಪಕ, ಸ್ನಾತಕೋತ್ತರ ಅರ್ಥಶಾಸ್ತ್ರ ವಿಭಾಗ, ಮಂಗಳ ಗಂಗೋತ್ರಿ, ಕೊಣಾಜೆ, ಮಂಗಳೂರು 574 152

**ಸಾ. ಅ. ಮಂಜುನಾಥ,** 45–5/1, 'ಶಂಕರಕೃಪ' ಹಿಂಭಾಗ, 16ನೆಯ ಅಡ್ಡ ರಸ್ತೆ; 3ನೆಯ ವಿಭಾಗ, ಜಯನಗರ, ಬೆಂಗಳೂರು 560 011.

**ಜಿ. ಎನ್. ನರಸಿಂಹಮೂರ್ತಿ,** ಮಾಜಿ ಕಾರ್ಯದರ್ಶಿ, ಕನ್ನಡ ಸಂಘ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ಶಾಖೆ, ಬೆಂಗಳೂರು 560 001.

**ಮು. ನಾ. ಕುಲಕರ್ಣಿ,** ಕ್ಷೇತ್ರಾಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ರಾಣೆಬೆನ್ನೂರು 581 115

# ಭಾರತದ ಅಭಿವೃದ್ಧಿ ಅರ್ಥವ್ಯವಸ್ಥೆಯಲ್ಲಿ ಬ್ಯಾಂಕು

ಎನ್. ಜಿ. ಚಂದ್ರಶೇಖರಯ್ಯ

ಭಾರತ ದೇಶ ವಿಪುಲ ಸೌಲಭ್ಯಗಳನ್ನು ಒಳಗೊಂಡ ಬಡ ರಾಷ್ಟ್ರ. ಹಲವಾರು ದಶಕಗಳ ಕಾಲ ವಿದೇಶೀ ಸಂಕೋಲೆಯಲ್ಲಿದ್ದು, ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದಿದ್ದ ರಾಷ್ಟ್ರ ತ್ವರಿತವಾದ ಪ್ರಗತಿಯನ್ನು ಸಾಧಿಸಲು ಪ್ರಜಾಸತ್ತಾತ್ಮಕ ಯೋಜನಾಭಿವೃದ್ಧಿ ವಿಧಾನವನ್ನು ಆರಿಸಿಕೊಂಡದ್ದು ಗಮನಾರ್ಹವಾದ ವಿಚಾರ. ಪ್ರಜಾಸತಾತ್ಮಕ ವಿಧಾನದಲ್ಲಿ ತ್ವರಿತವಾದ ಪ್ರಗತಿಯನ್ನು ಸಾಧಿಸುವುದಕ್ಕೆ ಅನೇಕ ಎಡರುತೊಡರುಗಳು ಮೇಲಿಂದ ಮೇಲೆ ಸಂಭವಿಸುತ್ತಿರುತ್ತವೆ. ಸರ್ವಸಮ್ಮತವಾದ ಅಭಿವೃದ್ಧಿ ವಿಧಾನವನ್ನು ಅಂಗೀಕರಿಸುವುದು ಭಾರತದಂಥ ರಾಷ್ಟ್ರಕ್ಕೆ ಸುಲಭಸಾಧ್ಯವಲ್ಲ. ಭಾರತದಂಥ ಹಿಂದುಳಿದ ಅರ್ಥ ವ್ಯವಸ್ಥೆಯ ಆವಶ್ಯಕತೆಗಳು ಬೆಟ್ಟದಷ್ಟಿವೆ, ವೈವಿಧ್ಯಪೂರ್ಣವಾಗಿವೆ. ಆದರೆ ಸೌಲಭ್ಯಗಳು ಮಾತ್ರ ಮಿತವಾಗಿವೆ. ಅಭಿವೃದ್ಧಿ ಸಾಧಿಸಬೇಕಾದಂಥ ಕ್ಷೇತ್ರಗಳು ನೂರಾರು. ಇಂಥ ಪರಿಸ್ಥಿತಿಯಲ್ಲಿ ಆದ್ಯತೆಗಳನ್ನು ನಿರ್ಧರಿಸುವುದೂ ಒಂದು ದೊಡ್ಡ ಸಮಸ್ಯೆಯೇ.

ಭಾರತ ಸರ್ಕಾರ ಸ್ವಾತಂತ್ರ್ಯಾನಂತರ ಸಮಾಜವಾದಿ ಸ್ವರೂಪದ ಅರ್ಥವ್ಯವಸ್ಥೆಯನ್ನು ಸ್ಥಾಪಿಸುವ ಉದ್ದೇಶವನ್ನು ವ್ಯಕ್ತಪಡಿಸಿತು. ಆದಾಗ್ಯೂ ವ್ಯಕ್ತಿಯ ಅಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡದ್ದರಿಂದ, ಸರ್ಕಾರ ಮಿಶ್ರ ಆರ್ಥಿಕ ನೀತಿಯನ್ನು ಪಾಲಿಸಲು ತೊಡಗಿತು. ಮಿಶ್ರ ಆರ್ಥಿಕ ಪದ್ಧತಿಯನ್ನು ಸಾರ್ಥಕಗೊಳಿಸುವುದಕ್ಕಾಗಿ ಸರ್ಕಾರ ಆರಿಸಿಕೊಂಡ ಅಭಿವೃದ್ಧಿ ವಿಧಾನ ಪ್ರಜಾಸತ್ತಾತ್ಮಕ ಯೋಜನೆ. ಆರ್ಥಿಕ ಕ್ಷೇತ್ರಗಳು ಖಾಸಗಿ ಮತ್ತು ಸರ್ಕಾರಿ ವಲಯದಲ್ಲಿ ಬೆಳೆಯಲು ಅವಕಾಶವನ್ನು ಮಾಡಲಾಗಿದೆ. ಸಣ್ಣದಾಗಿ ಸ್ಥಾಪಿಸಲಾದ ಅನೇಕ ಉದ್ಯಮಗಳು ಈ ಮೂವತ್ತು ವರ್ಷಗಳ ಕಾಲದಲ್ಲಿ ಬೃಹತ್ ಉದ್ಯಮಗಳಾಗಿ ಬೆಳೆದಿವೆ. ಭಾರತದಲ್ಲಿ ಬ್ಯಾಂಕು ರಾಷ್ಟ್ರೀಕರಣವನ್ನು ಕೈಗೊಳ್ಳುವುದಕ್ಕಿಂತ ಪೂರ್ವಭಾವಿಯಾಗಿಯೇ ಬ್ಯಾಂಕುಗಳು ಸಾಮಾಜಿಕ ಕರ್ತವ್ಯಗಳ ಕಡೆಗೆ ಹೆಚ್ಚು ಆಸಕ್ತಿ ವಹಿಸಬೇಕೆಂದು ಆದೇಶಗಳನ್ನು ಕೊಡಲಾಗಿತ್ತು. ಬ್ಯಾಂಕುಗಳ ಸಾಮಾಜಿಕ ಕರ್ತವ್ಯಗಳು ಹೆಚ್ಚು ಪರಿಣಾಮಕಾರಿಯಾಗದಿದ್ದುದರಿಂದ ಕೆಲವು ಬ್ಯಾಂಕುಗಳನ್ನು ಸರ್ಕಾರ ರಾಷ್ಟ್ರೀಕರಣ ಮಾಡಬೇಕಾಗಿ ಬಂತು. ಅಂದರೆ ಕೆಲವು ಬ್ಯಾಂಕುಗಳು ಸರ್ಕಾರಿ ವಲಯದಲ್ಲೂ ಮತ್ತೆ ಕೆಲವು ಬ್ಯಾಂಕುಗಳು ಖಾಸಗಿ ವಲಯದಲ್ಲೂ ಇರುವುದಕ್ಕೆ ಆಸ್ಪದ ಕೊಡಲಾಯಿತಷ್ಟೆ.

### ಆವಶ್ಯಕತೆ

ದೇಶದಲ್ಲಿ ಅಭಿವೃದ್ಧಿ ಪ್ರಯತ್ನ ಹೆಚ್ಚಿನ ಉತ್ಸಾಹದಿಂದ ನಡೆಯುತ್ತಿರುವಾಗ ಅನೇಕ ಹೊಸ ಸಮಸ್ಯೆಗಳು ತಲೆದೋರುತ್ತಿವೆ. ಅಭಿವೃದ್ಧಿ ವೆಚ್ಚವಂತೂ ದಿನದಿನಕ್ಕೆ ಹೆಚ್ಚುತ್ತಿದೆ. ಅಭಿವೃದ್ಧಿ ಕ್ಷೇತ್ರಗಳು ಹೆಚ್ಚು ವಿಶಾಲಗೊಳ್ಳುತ್ತಿವೆ. ದೇಶದಲ್ಲಿ ಸಾಕಷ್ಟು ಸಾಮಾಜಿಕ ಪ್ರಜ್ಞೆಯೂ ಉಂಟಾಗಿದೆ. ಈ ಕಾರಣದಿಂದ ಪರಿಮಿತ ಸೌಲಭ್ಯಗಳನ್ನು ಮಿತವಾಗಿ, ಪರಿಣಾಮಕಾರಿಯಾಗಿ, ಹೆಚ್ಚು ಉಪಯುಕ್ತವಾಗುವಂತೆ ಉಪಯೋಗಿಸಬೇಕಾಗಿದೆ.

ಅಭಿವೃದ್ಧಿ ಯೋಜನೆಗಳನ್ನು ಕೈಗೊಳ್ಳುವುದಕ್ಕೆ ಮುಖ್ಯವಾಗಿ ಹಣ ಸೌಲಭ್ಯ ದೊರಕಬೇಕು. ತಲಾ ವರಮಾನ ಬಹಳ ಕಡಿಮೆಯಾಗಿರುವ ಮತ್ತು ಬೇಡಿಕೆಗಳು ಹೆಚ್ಚುತ್ತಿರುವ ಈ ದೇಶದಲ್ಲಿ ಉಳಿತಾಯವನ್ನು ಹೆಚ್ಚಿಸಿ ಬಂಡವಾಳಕ್ಕೆ ಹಣ ಒದಗಿಸುವುದು ಕಷ್ಟಸಾಧ್ಯವಾದ ವಿಚಾರ. ಅಲ್ಪ ಸ್ವಲ್ಪ ಉಳಿತಾಯ ಜನಸಾಮಾನ್ಯರಲ್ಲಿ ಉಂಟಾದರೆ, ಅದನ್ನು ಕ್ರೋಡೀಕರಿಸುವುದಕ್ಕೆ ಸರಿಯಾದ ಸಂಘ ಸಂಸ್ಥೆಗಳ ಅಭಾವ ಒಂದು ಕಾಲದಲ್ಲಿ ಇದ್ದುದರಿಂದ, ದೇಶದಲ್ಲಿ ಸರಿಯಾದ ಹಣಪೇಟೆ, ಷೇರುಪೇಟೆ ಬೆಳೆಯಲು ಸಾಧ್ಯವಾಗಲಿಲ್ಲ. 1970ರ ದಶಕದಿಂದೀಚೆಗೆ ದೇಶದಲ್ಲಿ ವ್ಯವಸ್ಥಿತ ಹಣಪೇಟೆಯ ಲಕ್ಷಣಗಳು ಕಂಡುಬರುತ್ತಿವೆ. ಮಧ್ಯಮ ವರ್ಗದ ಜನ ಹೊಸ ಷೇರುಗಳಲ್ಲಿ ಬಂಡವಾಳ ಹೂಡುವ ಉತ್ಸುಕತೆಯನ್ನು ವ್ಯಕ್ತಪಡಿಸುತ್ತಿದ್ದಾರೆ. ಅಭಿವೃದ್ಧಿಯ ಸೂಚನೆಗಳು ಕಂಡುಬಂದ ಸ್ಥಳಗಳಲ್ಲಿ ಹೊಸ ಬ್ಯಾಂಕುಗಳ ಸ್ಥಾಪನೆಯಾಗುತ್ತಿರುವುದರಿಂದ ಪ್ರಗತಿಯ ಪ್ರಯತ್ನಕ್ಕೆ ಉಳಿತಾಯದ ಕೊಡುಗೆಯೂ ದೊರೆಯುತ್ತದೆ.

ಹಣನೀತಿ

ಪ್ರಸಕ್ತ ಯೋಜನೆಗಳ ಉದ್ದೇಶ ಹಲವಾರು. ಅವುಗಳಲ್ಲಿ ಮುಖ್ಯವಾದವು ಪೂರ್ಣ ಉದ್ಯೋಗ, ತಲಾ ವರಮಾನದ ಹೆಚ್ಚಿನ ವೃದ್ಧಿ, ಗಮನಾರ್ಹವಾದ ಉತ್ಪಾದನೆ, ಸಮಾನ ವಿತರಣೆ ಇತ್ಯಾದಿ. ಈ ಉದ್ದೇಶಗಳು ಕೈಗೂಡಬೇಕಾದರೆ ಬ್ಯಾಂಕುಗಳು ಕ್ರಿಯಾತ್ಮಕವಾದ ನೀತಿಯನ್ನು ಪಾಲಿಸ ಬೇಕು. ದೇಶದಲ್ಲಿ ಭೌತಿಕ ಉತ್ಪಾದನೆ ಹೆಚ್ಚಿದಂತೆಲ್ಲಾ ಹಣ ವಿಸ್ತರಣೆಯೂ ನಡೆಯುತ್ತಿರಬೇಕು. ಭೌತಿಕ ವಸ್ತುಗಳ ಉತ್ಪಾದನೆಗೆ ಭೌತಿಕ ಸೌಲಭ್ಯಗಳು ಹೇಗೆ ಮುಖ್ಯವೋ ಹಾಗೆಯೇ ಹಣ ಸೌಲಭ್ಯವೂ ಮುಖ್ಯ ವಾದುದು. ಅಭಿವೃದ್ಧಿ ಅರ್ಥವ್ಯವಸ್ಥೆಯಲ್ಲಿ ಎಲ್ಲ ಬ್ಯಾಂಕುಗಳೂ ಪ್ರಗತಿಪರವಾದ ಧೋರಣೆಯನ್ನೇ ಪಾಲಿಸ ಬೇಕಾಗುತ್ತದೆ. ಕೇಂದ್ರೀಯ ಬ್ಯಾಂಕಿನ ಜವಾಬ್ದಾರಿ ಹೇಗೆ ಗುರುತರವಾಗಿರುವುದೋ ಹಾಗೆಯೇ ವಾಣಿಜ್ಯ ಬ್ಯಾಂಕು ಗಳು ಕೂಡ ಉತ್ಪಾದನಾಭಿವೃದ್ಧಿಗೆ ಹಣ ಸೌಲಭ್ಯವನ್ನು ಒದಗಿಸಬೇಕಾಗುತ್ತದೆ.

ಅಭಿವೃದ್ಧಿಶೀಲ ಅರ್ಥವ್ಯವಸ್ಥೆಯಲ್ಲಿ ತಲಾ ವರಮಾನ ಬಹಳ ಕೆಳಮಟ್ಟದಲ್ಲಿರುವುದರಿಂದ ಜನರ ಜೀವನ ಮಟ್ಟ ಹೀನಸ್ಥಿತಿಯಲ್ಲಿದೆ. ತಲಾ ವರಮಾನ ಹೆಚ್ಚಾದಾಗ ಅನು ಭೋಗ ಹೆಚ್ಚುವುದೇ ವಿನಾ ಉಳಿತಾಯ ಹೆಚ್ಚುವುದಿಲ್ಲ. ನಗರ ಪ್ರದೇಶಗಳ ಶ್ರಮಜೀವಿಗಳು ಗಳಿಸಿದ ವರಮಾನ ವನ್ನು ಉತ್ತಮ ಜೀವನವನ್ನು ಪಡೆಯುವುದಕ್ಕೆ ಉಪ ಯೋಗಿಸದೆ ದುಶ್ಚಟಗಳಿಗೆ ಉಪಯೋಗಿಸುವುದು ಹೆಚ್ಚು ತ್ತಿರುವುದರಿಂದ ಉತ್ಪಾದಕತೆಯ ವೃದ್ಧಿಯ ಮೇಲೂ ದುಷ್ಪರಿಣಾಮವಾಗಿದೆ. ಉಳಿತಾಯ ಅನ್ಯಮಾರ್ಗದಲ್ಲಿ ವ್ಯಯವಾಗುವುದನ್ನು ತಪ್ಪಿಸಲು ಸರಿಯಾದ ಬ್ಯಾಂಕು ವ್ಯವಸ್ಥೆ ಮಾಡಬೇಕಾಗುತ್ತದೆ.

ಉಳಿತಾಯದಿಂದಲೇ ಅಭಿವೃದ್ಧಿ ಕಾರ್ಯಗಳಿಗೆ ಹಣ ವನ್ನು ಒದಗಿಸುವುದಂತೂ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಕನಸು. ಆದುದರಿಂದ ಹಣ ವಿಸ್ತರಣೆ ಮತ್ತು ಸಾಲಸೃಷ್ಟಿ ಈ ದೇಶಗಳಲ್ಲಿ ಅನಿವಾರ್ಯವಾಗುತ್ತದೆ. ಈ ಎರಡು ವಿಧಾನ ಗಳನ್ನು ಅನುಸರಿಸುವಾಗ ಹಣದುಬ್ಬರಕ್ಕೆ ಅವಕಾಶ ಮಾಡಿ ಕೊಟ್ಟಂತಾಗುತ್ತದೆ. ಪಾಶ್ಚಾತ್ಯ ದೇಶಗಳ ಹಣದ ಇತಿಹಾಸ ದಲ್ಲಿ ಇಂಥ ಸಂದರ್ಭವನ್ನು ಕಾಣುತ್ತೇವೆ. ಹಣ ವಿಸ್ತರಣೆಯ ಜೊತೆಗೆ ಆರ್ಥಿಕ ಸ್ಥಿರತೆಯೂ ಮುಖ್ಯವಾಗುತ್ತದೆ. ಬೆಲೆ ಯನ್ನು ಸ್ಥಿರಗೊಳಿಸದಿದ್ದರೆ ಆರ್ಥಿಕಾಭಿವೃದ್ಧಿ ಸರ್ವತೋ ಮುಖವಾಗಿ ಸಾಧ್ಯವಾಗಲಾರದು. ಬೆಲೆಗಳ ಅಸ್ಥಿರತೆ ಯಿಂದಾಗಿ ನಮ್ಮ ದೇಶದಲ್ಲಿ ರಾಷ್ಟ್ರೀಯ ಉತ್ಪಾದನ ದರ ಸೇ. 1ರಿಂದ 2ರ ಒಳಗೇ ಇರುವುದನ್ನು ಕಾಣುತ್ತೇವೆ. ವೃದ್ಧಿ ನಿಧಾನವಾಗುವುದೇ ಅಲ್ಲದೆ ದೇಶದಲ್ಲಿ ಆರ್ಥಿಕ ಅಸಮತೆಗಳೂ ಅಸಮತೋಲಗಳೂ ಹೆಚ್ಚುತ್ತವೆ.

ಹಣದ ವಿಸ್ತರಣೆಯಿಲ್ಲದೆ ಅಭಿವೃದ್ಧಿ ದುಸ್ಸಾಧ್ಯ. ಅದರ ಪರಿಣಾಮ ಏನೇ ಇರಲಿ, ಹಣ ವಿಸ್ತರಣೆ ಅನಿವಾರ್ಯ. ಆದರೆ ಯಾವ ಪ್ರಮಾಣದಲ್ಲಿ ಹಣದ ವಿಸ್ತರಣೆಯಾಗ ಬೇಕೆಂಬುದು ವಿಚಾರಿಸಬೇಕಾದ ಮುಖ್ಯ ವಿಚಾರ. ಸೌಲಭ್ಯದ ಪರಿಣಾಮಕಾರಿ ಬಳಕೆಗೆ ಹಣ ವಿಸ್ತರಣೆಯ ಪರಿಮಾಣ ಸರಕುಗಳ ಮತ್ತು ಸೇವೆಗಳ ಭೌತಿಕ ಉತ್ಪಾದನೆಗಿಂತ ಮೀರಿರಕೂಡದೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಒಂದು ಪಕ್ಷ ಉತ್ಪಾದನೆಗಿಂತ ಹಣ ಪೂರೈಕೆ ಹೆಚ್ಚಾದರೆ, ಅದರಿಂದ ಹಣದುಬ್ಬರದ ದುಷ್ಪರಿಣಾಮಗಳು ಸಂಭವಿಸುತ್ತವೆ. ಉತ್ಪಾದನೆಗಿಂತ ಹಣ ಪೂರೈಕೆ ಕಡಮೆಯಾದರೆ ಹಣ ಸಂಚಯನ ಸಂಭವಿಸಿ ಅಭಿವೃದ್ಧಿ ಹಿನ್ನಡೆಯುತ್ತದೆ. ಹಣದುಬ್ಬರವೇ ಆಗಲಿ, ಹಣ ಸಂಚಯನವೇ ಆಗಲಿ ಸಮತೂಕದ ಅಭಿವೃದ್ಧಿಗೆ ಪ್ರತಿಕೂಲವಾಗುತ್ತದೆ. ಅರ್ಥಶಾಸ್ತ್ರಜ್ಞರು 'ಸುರಕ್ಷಿತ ವಾದ' ಹಣ ವಿಸ್ತರಣೆಯ ತತ್ತ್ವವನ್ನು ಈ ಸಂದರ್ಭದಲ್ಲಿ ಪ್ರಸ್ತಾಪ ಮಾಡಿದ್ದಾರೆ. ಈ 'ಸುರಕ್ಷಿತ' ಹಣ ವಿಸ್ತರಣೆಯ ಪ್ರಮಾಣ ಯಾವುದು? ಆರ್ಥಿಕಾಭಿವೃದ್ಧಿಯ ದರ ಮತ್ತು ಹಣ ವಿಸ್ತರಣೆಯ ದರ ಒಂದೇ ಸಮನಾಗಿರುವುದು. ಈ 'ಸುರಕ್ಷಿತ' ದರದ ಹಣ ವಿಸ್ತರಣೆ ಶಾಸ್ತ್ರಸಮ್ಮತ ವಾಗಿರುವುದಾದರೂ ಪ್ರಾಯೋಗಿಕವಾಗಿ ಈ ತತ್ತ್ವವನ್ನು ಅಲಕ್ಷ್ಯ ಮಾಡಿರುವುದನ್ನು ಅಭಿವೃದ್ಧಿಶೀಲ ರಾಷ್ಟ್ರಗಳ ಈಚಿನ ಹಣ ನಿರ್ವಹಣ ಕಾರ್ಯದಲ್ಲಿ ನೋಡಬಹುದು. ಅನೇಕ ಅಭಿವೃದ್ಧಿಶೀಲ ದೇಶಗಳ ಹಣ ವಿಸ್ತರಣೆಯ ದರ ಅಭಿವೃದ್ಧಿಯ ದರಕ್ಕಿಂತ ವಿಪರೀತವಾಗಿ ಹೆಚ್ಚಾಗಿದೆ. ಬ್ಯಾಂಕಿಂಗ್ ವಲಯದಲ್ಲಿ ಉಂಟಾಗಿರುವ ಅತಿ ಪ್ರಮಾಣದ ಸಾಲ ವಿಸ್ತರಣೆ, ಖೋತಾ ಧನಪೋಷಣೆಯ ಫಲವಾಗಿ ಕೇಂದ್ರ ಬ್ಯಾಂಕುಗಳು ಕೈಗೊಂಡಿರುವ ಹಣ ವಿಸ್ತರಣೆ—ಇವು ಅಭಿವೃದ್ಧಿಶೀಲ ದೇಶಗಳಲ್ಲಿ ಸಹಿಸಲಾಗದ ಹಣದುಬ್ಬರಕ್ಕೆ ಕಾರಣವಾಗಿವೆ.

ಹಣದುಬ್ಬರವನ್ನು ತಡೆಗಟ್ಟಲು ಅಭಿವೃದ್ಧಿಶೀಲ ರಾಷ್ಟ್ರ ಗಳಲ್ಲಿ ಕೇಂದ್ರೀಯ ಬ್ಯಾಂಕುಗಳು ಪರಿಮಿತವಾದ ಸಾಲ ನೀತಿಯನ್ನು ಪಾಲಿಸುತ್ತಿವೆ. ಒಂದು ವಲಯಕ್ಕೆ ಹೆಚ್ಚಿನ ಪರಿಮಾಣದ ಸಾಲ ನೀಡಿಕೆಯಾದರೆ, ಮತ್ತೊಂದು ವಲಯಕ್ಕೆ ಸಾಲವನ್ನು ನಿರಾಕರಿಸಲಾಗುತ್ತಿದೆ. ಸರ್ಕಾರಿ ವಲಯಕ್ಕೆ ಮಿತಿಯಿಲ್ಲದ ಸಾಲ ದೊರೆತರೆ, ಖಾಸಗಿ ವಲಯಕ್ಕೆ ಪರಿಮಿತವಾದ ಸಾಲ ದೊರೆಯುತ್ತದೆ. ಸರ್ಕಾರಿ ಕ್ಷೇತ್ರ ದಲ್ಲಿ ಹಣ ಸೌಲಭ್ಯಕ್ಕೆ ಕೊರತೆಯಿಲ್ಲ. ಆದರೆ ಉತ್ಪಾದನೆಯ

ವೇಗ ಮಾತ್ರ ನಿಧಾನ. ಇದರ ಪರಿಣಾಮವೆಂದರೆ, ಈ ಕ್ಷೇತ್ರಕ್ಕೆ ಪೂರೈಸಲಾದ ಉತ್ಪಾದನಾಂಗಗಳಿಗೆ ದೊರಕಿದ ಹೆಚ್ಚಿನ ವರಮಾನದಿಂದಾಗಿ ಅವುಗಳ ಬೇಡಿಕೆ ವಿಸ್ತಾರ ಗೊಂಡು, ದೇಶದಲ್ಲಿ ಮಿತವಾಗಿ ಪೂರೈಕೆಯಾಗುತ್ತಿರುವ ವಸ್ತುಗಳ ಮೇಲೆ ಅಧಿಕ ಒತ್ತಡ ಉಂಟಾಗುತ್ತದೆ. ಭಾರತ ದಲ್ಲಿ ಸರ್ಕಾರಿ ಕ್ಷೇತ್ರದ ಉದ್ಯಮ ಸಂಸ್ಥೆಗಳಿಗೆ ಪೂರೈಸಲಾದ ಸ್ವದೇಶಿ ಬಂಡವಾಳವೆಲ್ಲವೂ ಹಣ ವಿಸ್ತರಣೆಯಿಂದಲೇ ಆಗಿರುವುದು. ಉಳಿತಾಯದ ಪ್ರಮಾಣ ಬಹಳ ಕಡಿಮೆ. ಆದರೆ ಉತ್ಪಾದನೆ ಮಾಡುತ್ತಿರುವ ಖಾಸಗಿ ಕ್ಷೇತ್ರಕ್ಕೆ ಸಾಲದ ಪರಿಮಿತ ಪೂರೈಕೆಯಿಂದಾಗಿ ಈ ಕ್ಷೇತ್ರ ಇತರ ವಿಧಾನ ಗಳನ್ನು ಅನುಸರಿಸಬೇಕಾಗಿ ಬಂದಿದೆ. ಖಾಸಗಿ ಮಾರ್ಗ ಗಳಿಂದ, ಅಂದರೆ ಠೇವಣಿಗಳ ರೂಪದಲ್ಲಿ ಖಾಸಗಿ ಕ್ಷೇತ್ರದ ಉದ್ಯಮಗಳು ಹಣಸೌಲಭ್ಯವನ್ನು ಪಡೆಯುತ್ತಿವೆ. ಇದರ ಪರಿಣಾಮವಾಗಿ ಉತ್ಪಾದನೆಯ ವೆಚ್ಚ ಅಧಿಕಗೊಳ್ಳುತ್ತಿದೆ. ಉತ್ಪಾದನೆಯೂ ಮಿತವಾಗಿಯೇ ನಡೆಯುತ್ತಿದೆ. ಹೀಗಾಗಿ ಅಭಿವೃದ್ಧಿಗೆ ಹಣಪೂರೈಕೆ ವ್ಯವಸ್ಥಿತವಾಗಿ ನಡೆಯದೆ ಸಮಗ್ರ ಅಭಿವೃದ್ಧಿಯೇ ವಿಷಮಗೊಂಡಿದೆ. ದೇಶದ ಉಳಿತಾಯ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಕೇಂದ್ರೀಯ ಬ್ಯಾಂಕು ದೇಶದ ವಿವಿಧ ಅಭಿವೃದ್ಧಿ ಕ್ಷೇತ್ರಗಳ ಹಣ ಸೌಲಭ್ಯದ ಆವಶ್ಯಕತೆಗೆ ಅನುಗುಣವಾಗಿ ಹಣ ವಿಸ್ತರಣೆಯನ್ನು ನಿರ್ಧರಿಸಬೇಕು. ಉತ್ಪಾದನೆಯ ವೇಗ ಹೆಚ್ಚುತ್ತಿರುವಾಗ ಹಣದ ಉತ್ಪಾದನೆಯನ್ನು ಹೆಚ್ಚಿಸಬೇಕು. ಇಂಥ ಸಂದರ್ಭದಲ್ಲಿ ಕೇಂದ್ರೀಯ ಬ್ಯಾಂಕು ಹಣ ವಿಸ್ತರಣೆ ಮಾಡಲು ನಿರಾಸಕ್ತವಾದರೆ ಸ್ವಲ್ಪವೇ ಕಾಲದಲ್ಲಿ ಹಿಂಜರಿತ ಪರಿಸ್ಥಿತಿಯನ್ನು ಎದುರಿಸಬೇಕಾಗುತ್ತದೆ.

ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಅಭಿವೃದ್ಧಿಗೆಂದು ಮಾಡ ಲಾದ ಹಣವಿಸ್ತರಣೆಯೆಲ್ಲ ಅಭಿವೃದ್ಧಿಗೆ ಹೋಗದೆ ಇರಲು ಸಾಧ್ಯವಿದೆ. ಅನೇಕ ಉದ್ಯಮಿಗಳು ಉತ್ಪಾದನೆಗೆಂದು ಸಾಲವನ್ನು ಪಡೆದು ಸಟ್ಟಾ ವ್ಯಾಪಾರ, ಸರಕುಗಳ ಶೇಖರಣೆ ಮುಂತಾದ ಅನೀತಿಯುತವಾದ ವ್ಯವಹಾರಗಳಿಗೆ ಬಳಸುವುದೂ ಉಂಟು. ಇಂಥ ಸಂದರ್ಭಗಳು ಸರ್ವೇ ಸಾಮಾನ್ಯವಾಗಿರುವುದರಿಂದ ಕೇಂದ್ರೀಯ ಬ್ಯಾಂಕು ಅನೇಕ ಹತೋಟಿ ವಿಧಾನಗಳನ್ನು ಅನುಸರಿಸಬೇಕಾಗುತ್ತದೆ. ಬ್ಯಾಂಕ್ ದರ ನೀತಿ, ಸರ್ಕಾರಿ ಸಾಲಪತ್ರಗಳ ವಿಲೇವಾರಿ, ನಗದು ಠೇವಣಿಯ ಪ್ರಮಾಣ, ಕೆಲವು ಗುಣಾತ್ಮಕ ಸಾಲ ಹತೋಟಿ ವಿಧಾನಗಳು ಮುಂತಾದವುಗಳನ್ನು ನಿರ್ದಾಕ್ಷಿಣ್ಯ ವಾಗಿ ಪಾಲಿಸಬೇಕಾಗುತ್ತದೆ. ಹಣದುಬ್ಬರದ ಹತೋಟಿಗಾಗಿ ಸರ್ಕಾರ ಅಧಿಕ ತೆರಿಗೆಯ ನೀತಿಯನ್ನು ಪಾಲಿಸುವುದು ಅನಿವಾರ್ಯವಾಗುತ್ತದೆ. ಆದಾಗ್ಯೂ ಹಣದುಬ್ಬರದ ಹತೋಟಿ ಸಾಧ್ಯವಾಗಿಲ್ಲ.

### ರಿಸರ್ವ್ ಬ್ಯಾಂಕಿನ ಸ್ಥಾನ

ಭಾರತದಲ್ಲಿ ಯೋಜನಾ ಯುಗ ಪ್ರಾರಂಭವಾದ ಮೇಲೆ ಭಾರತೀಯ ರಿಸರ್ವ್ ಬ್ಯಾಂಕು ಕೂಡ ತ್ವರಿತವಾದ ರಾಷ್ಟ್ರೀಯ ಅಭಿವೃದ್ಧಿಯ ಪ್ರಯತ್ನದಲ್ಲಿ ಕ್ರಿಯಾತ್ಮಕ ಪಾತ್ರ ವಹಿಸುತ್ತಿದೆ. ಆಧುನಿಕ ರಾಜಕೀಯ ವ್ಯವಸ್ಥೆ ಯಲ್ಲಿ ರಿಸರ್ವ್ ಬ್ಯಾಂಕಿಗೆ ಸ್ವತಂತ್ರವಾದ ನೀತಿಯನ್ನು ಪಾಲಿಸಲು ಅವಕಾಶವಿಲ್ಲ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬಜೆಟ್‌ನಲ್ಲಿ ತುಂಬಲಾಗದ ಕೊರತೆಯನ್ನು ತೋರಿಸುತ್ತಿದ್ದರೆ ಅಂತಿಮವಾಗಿ ಅದರ ಜವಾಬ್ದಾರಿ ಕೇಂದ್ರೀಯ ಬ್ಯಾಂಕಿನ ಮೇಲೆ ಬೀಳುತ್ತದೆ. ಸರ್ಕಾರದ ಆಹಾರ ಧಾನ್ಯಗಳ ಖರೀದಿಗಾಗಿ ಅಗತ್ಯವಾದ ಉದರಿ ಯನ್ನೆಲ್ಲ ಬ್ಯಾಂಕಿಂಗ್ ವಲಯದ ಮೂಲಕ ಒದಗಿಸ ಬೇಕಾಗುತ್ತದೆ. ಖಾಸಗಿ ಕ್ಷೇತ್ರದ ಅಭಿವೃದ್ಧಿಯ ಹೊಣೆಯೂ ಸರ್ಕಾರಕ್ಕಿರುವುದರಿಂದ ಈ ಕ್ಷೇತ್ರದ ಅಭಿವೃದ್ಧಿಗಾಗಿ ಉದರಿ ವಿಸ್ತರಣೆ ಮಾಡಲೇಬೇಕಾಗಿದೆ. ಈ ಕಾರಣಗಳಿಂದಾಗಿ ರಿಸರ್ವ್ ಬ್ಯಾಂಕು ಪರಿಸ್ಥಿತಿಗಳ ಕೈಗೊಂಬೆಯಾಗಿದೆ. ಕೇಂದ್ರೀಯ ಬ್ಯಾಂಕು ಹಣ ಪೂರೈಕೆಯ ಕರ್ತವ್ಯವನ್ನು ನಿರ್ವಹಿಸಬಹುದೇ ವಿನಾ, ಅಭಿವೃದ್ಧಿಗಾಗಿಯೇ ಆ ಹಣ ತೊಡಗಿದೆಯೆಂದು ಪರಿಶೀಲಿಸಲು ಸಾಧ್ಯವಾಗ ಲಾರದು. ಒಂದು ಪಕ್ಷ ಅಭಿವೃದ್ಧಿ ಯೋಜನೆಗಳಿಗಾಗಿಯೇ ಹಣ ಪೂರೈಕೆ ಉಪಯೋಗವಾಗಿರಬಹುದು. ಆದರೆ ಉತ್ಪಾದನೆ ತ್ವರಿತ ಗತಿಯಲ್ಲಿ ಆಗದೆ ಇರುವುದರಿಂದ ಹಣ ಸೌಲಭ್ಯದ ಪರಿಣಾಮಕಾರಿ ಪ್ರಯೋಜನ ಕಂಡು ಬಂದಿಲ್ಲ. ಭಾರತದಲ್ಲಿ ಸೇ. 70ರಷ್ಟು ಉದ್ಯಮಗಳು ತಮ್ಮ ಉತ್ಪಾದನ ಸಾಮರ್ಥ್ಯದ ಸೇ. 60ರಷ್ಟನ್ನು ಮಾತ್ರ ಉತ್ಪಾದಿಸುತ್ತವೆ. ಅನೇಕ ಉದ್ಯಮಗಳಲ್ಲಿ ಫಲಪ್ರಾಪ್ತಿ ಬಹಳ ನಿಧಾನವಾಗಿರುವುದರಿಂದ ಹಣ ಪೂರೈಕೆಯಿಂದ ಹಣದುಬ್ಬರ ಸಂಭವಿಸುವುದನ್ನು ತಪ್ಪಿಸಲಾಗಿಲ್ಲ. ಹಣ ದುಬ್ಬರದ ಹತೋಟಿಗೆ ಯಾವುದೇ ಕ್ರಮ ಕೈಗೊಂಡರೂ ಅದು ಫಲಕಾರಿಯಾಗಿಲ್ಲ. ಇದಕ್ಕೆ ಕಾರಣವಿಷ್ಟೇ. ಉತ್ಪಾ ದನೆಯನ್ನು ತ್ವರಿತಗೊಳಿಸಲು ರಿಸರ್ವ್ ಬ್ಯಾಂಕಿಗೆ ಯಾವ ಅಧಿಕಾರವೂ ಇಲ್ಲ. ಅಲ್ಲದೆ ಹಣೇತರ ಸೌಲಭ್ಯವನ್ನು ರಿಸರ್ವ್ ಬ್ಯಾಂಕು ಒದಗಿಸಲಾರದು. ಹೀಗಾಗಿ ಉತ್ಪಾದನೆ ವಿಳಂಬಗೊಳ್ಳುತ್ತದೆ. ಹಣದುಬ್ಬರದ ಹತೋಟಿಗೆ ಏಕೈಕ ಮಾರ್ಗವೆಂದರೆ ದೇಶದಲ್ಲಿ ಸರಕುಗಳ ಮತ್ತು ಸೇವೆಗಳ ಉತ್ಪಾದನೆಯನ್ನು ಅಧಿಕಗೊಳಿಸುವುದು. ಅಲ್ಲದೆ ಬ್ಯಾಂಕು ಸಾಲ ಅನುತ್ಪಾದಕ ಚಟುವಟಿಕೆಗಳಿಗೆ ಒದಗದಂತೆ ಮಾಡುವುದು. ಇಂಥ ಕ್ರಮವನ್ನು ಕಟ್ಟುನಿಟ್ಟಾಗಿ ಪಾಲಿಸ ಬೇಕು.

### ಕಪ್ಪು ಹಣದ ಪ್ರಭಾವ

ದೇಶದಲ್ಲಿ ವ್ಯಾಪಕವಾಗುತ್ತಿರುವ ಹಣದುಬ್ಬರಕ್ಕೆ ಕಪ್ಪು ಹಣದ ಚಲಾವಣೆಯೂ ಬಹುಮಟ್ಟಿಗೆ ಕಾರಣ. ರಿಸರ್ವ್ ಬ್ಯಾಂಕಿನ ವ್ಯಾಪ್ತಿಯೊಳಗೆ ಈ ಕಪ್ಪು ಹಣದ ವಹಿವಾಟು ಬರುವುದಿಲ್ಲವಾದ್ದರಿಂದ ರಿಸರ್ವ್ ಬ್ಯಾಂಕಿನ ಹತೋಟಿ ಕ್ರಮಗಳು ಅನೇಕ ಸಾರಿ ವಿಫಲಗೊಳ್ಳುತ್ತವೆ. ಕಪ್ಪು ಹಣಕ್ಕೆ ಸಮಾಂತರವಾಗಿ ದೇಶದಲ್ಲಿ ದೇಶೀಯ ಬ್ಯಾಂಕರುಗಳು ನಡೆಸುತ್ತಿರುವ ಹಣ ವ್ಯವಹಾರವೂ ಹಣದುಬ್ಬರಕ್ಕೆ ಕಾರಣವಾಗಿದೆ. ಕಪ್ಪು ಹಣದ ಮೇಲೆ ಸರ್ಕಾರ ಸಮರವನ್ನೇ ಘೋಷಿಸಿರುವುದಾದರೂ, ಬೇರರ್ ಬಾಂಡುಗಳೇ ಮುಂತಾದ ಹೊಸ ವಿಧಾನಗಳನ್ನು ಜಾರಿಗೆ ತುಂದಿರುವುದಾದರೂ ಪರಿಸ್ಥಿತಿಯ ಒಂದು ಅಣುವಷ್ಟೂ ಹತೋಟಿಗೆ ಬಂದಿಲ್ಲ. ದೇಶೀಯ ಬ್ಯಾಂಕುಗಳನ್ನು ವಾಣಿಜ್ಯ ಬ್ಯಾಂಕುಗಳನ್ನಾಗಿ ಪರಿವರ್ತಿಸುವ ಕಾರ್ಯವೂ ಅಷ್ಟು ಉತ್ಸುಕತೆಯಿಂದ ಕೂಡಿಲ್ಲ. ಇಂಥ ಪರಿಸ್ಥಿತಿಯಲ್ಲಿ ಬ್ಯಾಂಕು ವಲಯದ ಯಾವ ಪರಿಣಾಮಕಾರಿ ನೀತಿಯೂ ಫಲಿಸದು. ಆದಾಗ್ಯೂ ಕೇಂದ್ರೀಯ ಬ್ಯಾಂಕು ಸಾಲದ ದುರುಪಯೋಗ, ಹಣದುಬ್ಬರಕ್ಕೆ ಆಸ್ಪದ ಮುಂತಾದವುಗಳನ್ನು ತಡೆಗಟ್ಟಬೇಕು.

### ವಾಣಿಜ್ಯ ಬ್ಯಾಂಕುಗಳು

ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಕೆಲವು ವಾಣಿಜ್ಯ ಬ್ಯಾಂಕುಗಳು ಸರ್ಕಾರಿ ವಲಯದಲ್ಲೂ ಮತ್ತೆ ಕೆಲವು ಬ್ಯಾಂಕುಗಳು ಖಾಸಗಿ ವಲಯದಲ್ಲೂ ಇವೆ. ಸರ್ಕಾರಿ ಕ್ಷೇತ್ರದಲ್ಲಿರುವ ಬ್ಯಾಂಕುಗಳೆಲ್ಲ ಖಾಸಗಿ ಬ್ಯಾಂಕುಗಳಾಗಿದ್ದು ರಾಷ್ಟ್ರೀಕರಣಗೊಂಡಂಥವು. ಈ ಬ್ಯಾಂಕುಗಳ ಜೊತೆಗೆ ವಿದೇಶಿ ಬ್ಯಾಂಕುಗಳೂ ಇವೆ. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಅಭಿವೃದ್ಧಿ ಕಾರ್ಯಗಳಿಗಾಗಿ ಬ್ಯಾಂಕು ಸಾಲದ ಬೇಡಿಕೆ ಯಾವಾಗಲೂ ಹೆಚ್ಚುತ್ತಾ ಇರುತ್ತದೆ. ಖಾಸಗಿ ಕ್ಷೇತ್ರದ ಅನೇಕ ವಿಧವಾದ ಚಟುವಟಿಕೆಗಳಿಗೆ ತಾತ್ಕಾಲಿಕ ಸಾಲ, ನಿರ್ದಿಷ್ಟ ಅವಧಿಯ ಸಾಲ ಅಗತ್ಯವಾಗಿರುತ್ತದೆ. ದೀರ್ಘ ಅವಧಿ ಸಾಲವನ್ನು ಈ ಬ್ಯಾಂಕುಗಳು ನೀಡುವುದಿಲ್ಲವಾದ್ದರಿಂದ, ಅದಕ್ಕಾಗಿಯೇ ಪ್ರತ್ಯೇಕವಾದ ಅಭಿವೃದ್ಧಿ ಬ್ಯಾಂಕುಗಳನ್ನು ಸ್ಥಾಪಿಸಲಾಗಿದೆ. ಕೇಂದ್ರೀಯ ಬ್ಯಾಂಕಿನ ನೆರವಿನಿಂದಾಗಿ ಅಭಿವೃದ್ಧಿ ಬ್ಯಾಂಕುಗಳ ಕಾರ್ಯಕ್ಷೇತ್ರವೂ ವಿಶಾಲಗೊಳ್ಳುತ್ತಿದೆ.

ಬ್ಯಾಂಕುಗಳು ಒಂದು ಕಾಲದಲ್ಲಿ ಸಂಕುಚಿತ ಮತ್ತು ಪ್ರತ್ಯೇಕತಾ ಸಾಲನೀತಿ ಹೊಂದಿದ್ದುವು. ದೇಶದ ರಾಜಕೀಯ ಮತ್ತು ಆರ್ಥಿಕ ರಚನೆಯ ಬದಲಾವಣೆಯಾದಂತೆಲ್ಲ ಬ್ಯಾಂಕುಗಳೂ ತಮ್ಮ ನೀತಿಯನ್ನು ಬದಲಾಯಿಸುತ್ತ ಬಂದುವು. ಈ ನೀತಿಯ ಬದಲಾವಣೆಗೆ ಬಹುಮಟ್ಟಿಗೆ ಸರ್ಕಾರದ ಪ್ರಭಾವವೇ ಕಾರಣ. ಭಾರತದಲ್ಲಿ ಮೂರನೆಯ ಯೋಜನೆಯ ಕಾಲದಲ್ಲಿ ಸರ್ಕಾರ ಬ್ಯಾಂಕುಗಳ ಸಾಮಾಜಿಕ ಹತೋಟಿ ಕಾರ್ಯಕ್ರಮವನ್ನು ಜಾರಿಗೆ ತಂದಿತು. ಈ ಮೊದಲೇ 1955ರಲ್ಲಿ ಪ್ರಪ್ರಥಮವಾಗಿ ಪ್ರಬಲವಾದ ಇಂಪೀರಿಯಲ್ ಬ್ಯಾಂಕನ್ನು ರಾಷ್ಟ್ರೀಕರಣ ಮಾಡಿತು. 1969ರಲ್ಲಿ ಸರ್ಕಾರ ರಾಷ್ಟ್ರೀಕರಣವೆಂಬ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಹದಿನಾಲ್ಕು ದೊಡ್ಡ ಬ್ಯಾಂಕುಗಳನ್ನು ರಾಷ್ಟ್ರೀಕರಣ ಮಾಡಿತು. ಈ ಎಲ್ಲ ಘಟನೆಗಳು ಬ್ಯಾಂಕು ವಲಯದಲ್ಲಿ ಸಂಭವಿಸಿದ ಪರಿಣಾಮವಾಗಿ ಇಂದು ವಾಣಿಜ್ಯ ಬ್ಯಾಂಕುಗಳ ಪಾತ್ರವೇ ಪೂರ್ಣವಾಗಿ ಬದಲಾಗಿದೆ ಯಾವುದೇ ಅಭಿವೃದ್ಧಿ ಕಾರ್ಯವಾಗಲಿ, ಸಮಾಜೋದ್ಧಾರ ಕಾರ್ಯವಾಗಲಿ, ಬ್ಯಾಂಕುಗಳು ಮುಂದೆ ನುಗ್ಗಿ ತಮ್ಮ ಪಾಲಿನ ಕರ್ತವ್ಯಗಳನ್ನು ನಿರ್ವಹಿಸುತ್ತವೆ. ಲಾಭಬಡುಕತನ ಮಾಯವಾಗಿ, ಸಾಮಾಜಿಕ ಅಭಿವೃದ್ಧಿಯ ಗುರಿ ಪ್ರಜ್ವಲಿಸುತ್ತಿದೆ. ಹಿಂದೆ ಕಡೆಗಣಿಸಲಾದ ಕ್ಷೇತ್ರಗಳಿಗೆ ಇಂದು ಆದ್ಯತೆ ಸಲ್ಲುತ್ತಿದೆ. ಆಧುನಿಕ ಬ್ಯಾಂಕುಗಳು ದೇಶದ ಮೂಲೆ ಮೂಲೆಗಳಲ್ಲೂ ತೆರೆಯಲ್ಪಟ್ಟಿವೆ. ಉದಾರವಾದ ಸಾಲನೀತಿ ಜಾರಿಗೆ ಬಂದಿದೆ. ಆಧಾರಕ್ಕೆ ಪರ್ಯಾಯವಾಗಿ ಉದ್ದೇಶವೇ ಸಾಲ ನೀಡುವುದಕ್ಕೆ ಅರ್ಹವಾದ ಅಂಶವೆಂದು ಇಂದು ಪರಿಗಣಿಸಲ್ಪಟ್ಟಿದೆ. ಸಾಂಪ್ರದಾಯಿಕ ಸಿದ್ಧಾಂತ ಮೂಲೆಗೊತ್ತಲ್ಪಟ್ಟು ಹೊಸ ಸಿದ್ಧಾಂತ ರೂಪಿತವಾಗಿದೆ.

ಇಂದು ದ್ರವತೆ, ಲಾಭಪ್ರದತೆಗಳ ನಡುವೆ ಯಾವ ಘರ್ಷಣೆಗೂ ಅವಕಾಶವಿಲ್ಲ. ವಾಣಿಜ್ಯ ಬ್ಯಾಂಕುಗಳು ವಟಾಯಿಸಿದ ಅನೇಕ ಹುಂಡಿಗಳನ್ನು ಕೇಂದ್ರೀಯ ಬ್ಯಾಂಕು ಮರುವಟಾವಣೆ ಮಾಡುತ್ತದೆ. ಹುಂಡಿ ಯೋಜನೆಯ ಪ್ರಾಮುಖ್ಯ ಇಂದಿನ ಬ್ಯಾಂಕಿನ ವ್ಯವಹಾರದಲ್ಲಿ ಕಡಮೆಯಾಗುತ್ತಿದೆ. ಅನೇಕ ಹೊಸ ಉದ್ಯಮಗಳು ಹುಂಡಿಗಳನ್ನು ಸೃಷ್ಟಿಸಿ ಬ್ಯಾಂಕು ಸಾಲವನ್ನು ಪಡೆಯುವುದಕ್ಕೆ ಬದಲಾಗಿ ನಿರ್ದಿಷ್ಟ ಅವಧಿಯ ಸಾಲವನ್ನು ಪಡೆಯುತ್ತಿವೆ. ಬ್ಯಾಂಕುಗಳೂ ಇಂಥ ವ್ಯವಹಾರಕ್ಕೆ ಬೆಂಬಲ ಕೊಡುತ್ತಿವೆ. ಈ ಹೊಸ ರೀತಿಯ ಅವಧಿಯ ಸಾಲ ಪಾಶ್ಚಾತ್ಯ ಅಭಿವರ್ಧಿತ ದೇಶಗಳಲ್ಲಿ ಮೊದಲು ಜಾರಿಗೆ ಬಂತು. ಈಗ ಇದು ಅಭಿವೃದ್ಧಿಶೀಲ ರಾಷ್ಟ್ರಗಳಲ್ಲೂ ಬಳಕೆಗೆ ಬಂದಿದೆ. ಹುಂಡಿ ಸಾಲಕ್ಕಿಂತ ಅವಧಿಕ ಸಾಲದಲ್ಲಿ ಅನೇಕ ಪ್ರಯೋಜನಗಳು ಇವೆ. ಬ್ಯಾಂಕುಗಳು ಉದ್ಯಮಗಳಿಗೆ ಕೊಡುವ ಸಾಲ ಒಂದು ವರ್ಷದಿಂದ ಐದು ವರ್ಷಗಳ ವರೆಗೆ ಇರುವುದರಿಂದ, ಸಾಲ ತೀರುವಿಕೆಗೆ ಸಾಕಷ್ಟು ಅವಧಿ ದೊರಕುತ್ತದೆ. ಆದರೆ ಹುಂಡಿಯ ಅವಧಿ ಕೇವಲ ಆರು ತಿಂಗಳು. ಆ

ಕಡಮೆ ಅವಧಿಯ ಒಳಗೆ ಎಲ್ಲ ಸಾಲವನ್ನೂ ತೀರಿಸಬೇಕಾಗುತ್ತದೆ. ಆದರೆ ಅವಧಿಯ ಸಾಲದಲ್ಲಿ ಸಾಲ ತೀರುವಿಕೆಯನ್ನು ಏಕಕಾಲದಲ್ಲಿ ಮಾಡಬೇಕಾದ ಆವಶ್ಯಕತೆ ಇರುವುದಿಲ್ಲ. ಹಣ ಒದಗಿದಂತೆ ಸಾಲವನ್ನು ತೀರಿಸಿ ಹೊರೆಯನ್ನು ಕಡಿಮೆ ಮಾಡಿಕೊಳ್ಳಬಹುದು. ಇಂಥ ಸಾಲಗಳಿಗೆ ಉದ್ಯಮಗಳಲ್ಲಿ ಸ್ಥಾಪಿಸಲಾಗಿರುವ ಯಂತ್ರಗಳು, ಸರಕುಗಳು, ಇತರ ಸ್ಥಿರಾಸ್ತಿಗಳು ಆಧಾರವಾಗಿರುತ್ತವೆ. ಹೀಗಾಗಿ ಸಾಂಪ್ರದಾಯಿಕ ದ್ರವತೆ ಸಿದ್ಧಾಂತದ ಪ್ರಾಮುಖ್ಯ ಅಭಿವೃದ್ಧಿ ಅರ್ಥವ್ಯವಸ್ಥೆಯಲ್ಲಿ ಕಡಮೆಯಾಗುತ್ತ ಬಂದಿದೆ.

ವಾಣಿಜ್ಯ ಬ್ಯಾಂಕುಗಳು ಕೊಡುವ ಸಾಲ ಸೌಲಭ್ಯ ಉತ್ಪಾದನೆಗೆ ಸೀಮಿತವಾಗಿರುವುದಾದರೂ ಅನುಭೋಗಕ್ಕೆ ಕೊರತೆಯನ್ನುಂಟುಮಾಡುವುದು ಬ್ಯಾಂಕುಗಳ ನೀತಿಯಲ್ಲ. ಅನೇಕ ಉತ್ಪಾದಿತ ಸರಕುಗಳ, ಅದರಲ್ಲೂ ಮುಖ್ಯವಾಗಿ ಹೆಚ್ಚಿನ ಬೆಲೆಯುಳ್ಳ, ಬಹುಕಾಲ ಬಾಳುವ ಸರಕುಗಳ ಅನುಭೋಗ ಹೆಚ್ಚಬೇಕಾದರೆ ಗ್ರಾಹಕರಿಗೆ ಬ್ಯಾಂಕು ಸಾಲ ಸೌಲಭ್ಯ ಒದಗಬೇಕಾಗುತ್ತದೆ. ಉತ್ಪಾದನೆಗೆ ಸಾಲ ಕೊಡುವುದರ ಜೊತೆಗೆ ಅನುಭೋಗಕ್ಕೂ ಸಾಲ ಕೊಡುವುದಾದರೆ ಆ ಕೈಗಾರಿಕೆಯ ಅಭಿವೃದ್ಧಿಯಾಗುತ್ತದೆ. ಈ ದೃಷ್ಟಿಯಿಂದ ನೋಡಿದರೆ ಕಂತು ಸಾಲ ಅವಶ್ಯವಾಗುತ್ತದೆ.

ಬ್ಯಾಂಕುಗಳು ಒಂದು ಕಾಲದಲ್ಲಿ ವ್ಯಾಪಾರಕ್ಕೆ ಗಣನೀಯವಾಗಿ ಸಾಲ ಸೌಲಭ್ಯವನ್ನು ಒದಗಿಸುತ್ತಿದ್ದುವು. ವ್ಯಾಪಾರ ಮತ್ತು ವಾಣಿಜ್ಯಕ್ಕಾಗಿ ಕೊಡುತ್ತಿದ್ದ ಸಾಲ ಒಟ್ಟು ಸಾಲದಲ್ಲಿ ಸೇ. 60ರಿಂದ 70ರಷ್ಟು ಇರುತ್ತಿತ್ತು. ಕೈಗಾರಿಕೋದ್ಯಮಿಗಳಿಗೆ ಕೊಡಲಾಗುತ್ತಿದ್ದ ಸಾಲ ಅಲ್ಪ ಪ್ರಮಾಣದಲ್ಲಿರುತ್ತಿತ್ತು. ಅಲ್ಲದೆ ಬ್ಯಾಂಕುಗಳು ನಿರೀಕ್ಷಿಸುತ್ತಿದ್ದ ಆಧಾರಗಳೂ ಕೈಗಾರಿಕೆಗಳಿಗೆ ಎಟುಕಲಾರದಾಗಿದ್ದುವು. ಹೀಗಾಗಿ ಅನೇಕ ಹೊಸ ಕಂಪನಿಗಳು ಮ್ಯಾನೇಜಿಂಗ್ ಏಜೆಂಟರನ್ನು ಮರೆಹೊಗುತ್ತಿದ್ದುವು. ಆದರೆ ಈಚೆಗೆ ಬ್ಯಾಂಕುಗಳ ಸಾಲ ಪ್ರಕ್ರಿಯೆಯಲ್ಲಿ ಬಹಳವಾದ ಬದಲಾವಣೆಗಳು ಸಂಭವಿಸಿವೆ. ಉತ್ಪಾದನೆಗೆಂದು ಒಂದು ಪ್ರಮಾಣವನ್ನೇ ನಿರ್ಧರಿಸಲಾಗಿದೆ. ಕೈಗಾರಿಕೆಗಳಿಗೆ, ಅದರಲ್ಲೂ ಮುಖ್ಯವಾಗಿ ಸಣ್ಣ ಮತ್ತು ಮಧ್ಯಮ ವರ್ಗದ ಕೈಗಾರಿಕೆಗಳಿಗೆ, ಮಧ್ಯಮ ಅವಧಿಯ ಸಾಲ ಮತ್ತು ತಾತ್ಕಾಲಿಕ ಸಾಲಗಳನ್ನು ಬ್ಯಾಂಕುಗಳು ಒದಗಿಸುತ್ತವೆ. ಕೃಷಿ ಅಭಿವೃದ್ಧಿಗೆ ವಿವಿಧ ಮಟ್ಟಗಳಲ್ಲಿ ವಿವಿಧ ರೀತಿಯ ಸಾಲಗಳನ್ನು ಬ್ಯಾಂಕುಗಳು ಒದಗಿಸುತ್ತವೆ.

ಗೃಹೋಪಯುಕ್ತವಾದ, ಬಹುಕಾಲ ಬಾಳುವ ಮತ್ತು ಹೆಚ್ಚಿನ ಬೆಲೆಯ ಸರಕುಗಳನ್ನು ಕೊಳ್ಳಲು ಗ್ರಾಹಕರಿಗೆ ಕಂತು ಸಾಲವನ್ನು ಮೊಟ್ಟಮೊದಲನೆಯ ಬಾರಿಗೆ ಅಮೆರಿಕದ ವಾಣಿಜ್ಯ ಬ್ಯಾಂಕುಗಳು ಕೊಡಲು ಪ್ರಾರಂಭಿಸಿದುವು. ಈಚೆಗೆ ಈ ರೀತಿಯ ಸಾಲ ಬಹಳ ಮಟ್ಟಿಗೆ ಹೆಚ್ಚುತ್ತಿದೆ. ಈ ಸಾಲದಿಂದ ಕೈಗಾರಿಕೆಗಳಿಗೆ ಹೆಚ್ಚಿನ ಪ್ರೋತ್ಸಾಹ ಒದಗುವುದಲ್ಲದೆ ಗ್ರಾಹಕರಿಗೆ ವಸ್ತುಗಳನ್ನು ಕೊಳ್ಳಲು ಸಹಾಯವಾಗುತ್ತದೆ. ಈ ಸಾಲದಿಂದ ದ್ರವತೆಯ ಮತ್ತು ಲಾಭಪ್ರದತೆಯ ತತ್ತ್ವಗಳೆರಡನ್ನೂ ಪಾಲಿಸಬಹುದು. ಸಾಲ ಪೂರೈಕೆಯಾಗುವ ವರೆಗೂ ಸರಕುಗಳು ಬ್ಯಾಂಕುಗಳ ಸಾಲಕ್ಕೆ ಆಧಾರವಾಗಿರುತ್ತವೆ. ಖಾಸಗಿ ಬ್ಯಾಂಕುಗಳಿಗೇ ಸೀಮಿತವಾಗಿದ್ದ ಈ ವ್ಯವಹಾರ ಈಗ ಸರ್ಕಾರಿ ಬ್ಯಾಂಕುಗಳಿಗೂ ವಿಸ್ತರಿಸಲ್ಪಟ್ಟಿದೆ. ಇಂದು ಬ್ಯಾಂಕುಗಳು ಸಂಬಳದಾರರಿಗೆ ನಿರ್ಭಯವಾಗಿ, ನಿರಾತಂಕವಾಗಿ ಕಂತು ಸಾಲಗಳನ್ನು ಸರಕುಗಳ ಖರೀದಿಗಾಗಿ ಕೊಡುತ್ತಿವೆ. ಬ್ಯಾಂಕುಗಳ ವ್ಯವಹಾರದಲ್ಲಿ ಈ ವಿಧಾನ ಯಾವ ತತ್ತ್ವಕ್ಕೂ ವಿರೋಧವಾಗಿಲ್ಲ.

ಮತ್ತೊಂದು ಮುಖ್ಯವಾದ ಸಾಲ ನೀಡಿಕೆಯ ವಿಧಾನವೆಂದರೆ ವೈಯಕ್ತಿಕ ಸಾಲ. ಈ ಸಾಲ ಓವರ್‌ಡ್ರಾಫ್ಟ್‌ಗಿಂತ (ಮೀರೆಳೆತ) ವಿಭಿನ್ನವಾಗಿದೆ. ಆರ್ಥಿಕ ಸ್ಥಿರತೆ ಹೊಂದಿರುವ ವ್ಯಕ್ತಿಗಳಿಗೆ ಸಾಮಾಜಿಕ ಅಥವಾ ಶೈಕ್ಷಣಿಕ ಕರ್ತವ್ಯಗಳನ್ನು ಪಾಲಿಸಲು ಅನುವಾಗುವಂತೆ ಬ್ಯಾಂಕುಗಳು ವೈಯಕ್ತಿಕ ಸಾಲ ಕೊಡಲು ಮುಂದೆ ಬಂದಿವೆ. ಇದು ಅನುಭೋಗ ಸಾಲ. ಸಾಮಾನ್ಯವಾಗಿ ಅನುಭೋಗ ಸಾಲಕ್ಕೆ ಮೀಸಲಾದ ಸಾಲ ಸಂಸ್ಥೆಗಳೆಂದರೆ ಗ್ರಾಮಾಂತರ ಸಹಕಾರಿ ಬ್ಯಾಂಕುಗಳು, ನಗರ ಸಹಕಾರಿ ಬ್ಯಾಂಕುಗಳು. ಆದರೆ ವಾಣಿಜ್ಯ ಬ್ಯಾಂಕುಗಳು ವೈಯಕ್ತಿಕ ಸಾಲವನ್ನು ಒದಗಿಸುತ್ತಿರುವುದು ವಿವೇಕಯುತವಾದ ವಿಚಾರ. ಇಂಥ ಸಾಲಗಳಿಂದ ಮಧ್ಯಮ ವರ್ಗದ ಮತ್ತು ಕೆಳವರ್ಗದ ಸಂಸಾರಿಗಳು ಸಾಹುಕಾರರ ಶೋಷಣೆಗೆ ಒಳಗಾಗುವುದು ತಪ್ಪಿದೆ. ಹೀಗೆ ಆಧುನಿಕ ಬ್ಯಾಂಕು ವಲಯ ಅಭಿವೃದ್ಧಿಶೀಲ ಅರ್ಥ ವ್ಯವಸ್ಥೆಗಳಲ್ಲಿ ಹೊಸ ಪ್ರಯೋಗಗಳನ್ನು ಮಾಡುತ್ತಿದೆ. 1969ರಿಂದ ಈಚೆಗೆ ಭಾರತೀಯ ವಾಣಿಜ್ಯ ಬ್ಯಾಂಕುಗಳು ಆರ್ಥಿಕವಾಗಿ ಹಿಂದುಳಿದ ವರ್ಗಕ್ಕೆ ಕಡಿಮೆ ಬಡ್ಡಿಯ ದರದಲ್ಲಿ ಸಾಲ ಕೊಡುತ್ತಿವೆ. ಭಾರತೀಯ ವಾಣಿಜ್ಯ ಬ್ಯಾಂಕುಗಳು ಗ್ರಾಮಾಭಿವೃದ್ಧಿಗಾಗಿ ನೆರವಾಗಲು ಕೆಲವು ಹಳ್ಳಿಗಳನ್ನೇ ದತ್ತು ತೆಗೆದುಕೊಂಡಿವೆ. ದತ್ತು ತೆಗೆದುಕೊಂಡ ಹಳ್ಳಿಗಳು ಬ್ಯಾಂಕಿನ ಸಹಾಯದಿಂದ ಮಾದರಿ ಹಳ್ಳಿಗಳಾಗಿ ಪರಿವರ್ತನೆಗೊಳ್ಳುತ್ತಿರುವುದು ಗಮನಾರ್ಹವಾದ ವಿಚಾರ.

ಉಳಿತಾಯವನ್ನು ಕ್ರೋಡೀಕರಿಸುವುದಕ್ಕಾಗಿ ವಾಣಿಜ್ಯ ಬ್ಯಾಂಕುಗಳು ಅನುಸರಿಸುತ್ತಿರುವ ಮಾರ್ಗಗಳು ಆಕರ್ಷಕ

ವಾಗಿವೆ. ಉಳಿತಾಯದ ಕ್ರೋಡೀಕರಣದ ಅತ್ಯಾಧುನಿಕ ವಿಧಾನವೆಂದರೆ ಪಿಗ್ಮಿ ಠೇವಣಿ ಯೋಜನೆ. ಜನರು ಬ್ಯಾಂಕುಗಳಿಗೆ ಹೋಗಿ ಠೇವಣಿಯನ್ನು ಇಡುವುದಕ್ಕೆ ಬದಲಾಗಿ, ಬ್ಯಾಂಕು ನೌಕರರೇ ಅಥವಾ ಏಜೆಂಟರೇ ಗ್ರಾಹಕರಲ್ಲಿಗೆ ಬಂದು ಹಣವಸೂಲು ಮಾಡಿ ಠೇವಣಿ ಪಡೆಯುತ್ತಿದ್ದಾರೆ. ಇದು ನವೀನ ವಿಧಾನವೇ ಸರಿ. ವಿವಿಧ ರೀತಿಯ ಠೇವಣಿಗಳಿಂದ ಬ್ಯಾಂಕುಗಳಲ್ಲಿ ಠೇವಣಿ ಗಮನಾರ್ಹವಾಗಿ ಉಕ್ಕಿ, ಸಾಲ ಸೌಲಭ್ಯಕ್ಕಾಗಿ ಬ್ಯಾಂಕುಗಳು ಕೇಂದ್ರೀಯ ಬ್ಯಾಂಕನ್ನು ಅವಲಂಬಿಸದಂತೆ ಮಾರ್ಪಾಡಾಗಿದೆ.

ಬ್ಯಾಂಕುಗಳು ಅನುಸರಿಸುತ್ತಿದ್ದ ಕಂದಾಚಾರ ಪದ್ಧತಿಯೂ ಅಭಿವೃದ್ಧಿಶೀಲ ಅರ್ಥ ವ್ಯವಸ್ಥೆಯಲ್ಲಿ ಕಾಲ ಸವೆದಂತೆ ಬದಲಾಗಿದೆ. ಜನಸೇವೆಯೇ ಗುರಿಯಾಗಿರುವ ತತ್ವಗಳು ಜಾರಿಗೆ ಬಂದಿವೆ ಮತ್ತು ಬರುತ್ತಿವೆ. ಆಧುನಿಕ ಸರ್ಕಾರಗಳು ಬ್ಯಾಂಕು ವಲಯವನ್ನು ಬಹುತೇಕ ರಾಷ್ಟ್ರೀಕರಿಸಿರುವುದರಿಂದ ಬ್ಯಾಂಕುಗಳು ತಮ್ಮದೇ ಆದ ಸಾಲದ ಧೋರಣೆಯನ್ನು ಹೊಂದಲು ಅವಕಾಶವಿಲ್ಲ. ಸರ್ಕಾರಗಳು ರಾಷ್ಟ್ರೀಯ ಬ್ಯಾಂಕು ಸಾಲ ಯೋಜನೆಯನ್ನು ರೂಪಿಸಿದ್ದರೂ, ಪರಿಮಿತಿಯಲ್ಲಿ ಬ್ಯಾಂಕುಗಳು ಕಾರ್ಯ ನಿರ್ವಹಿಸಬೇಕಾಗಿರುವುದಾದರೂ ಬ್ಯಾಂಕುಗಳು ನೂತನ ವಿಧಾನಗಳನ್ನು ಅನ್ವೇಷಿಸಿ ಕಾರ್ಯತತ್ಪರವಾಗುವುದಕ್ಕೆ ಯಾವ ಅಡ್ಡಿಯೂ ಉಂಟಾಗಿಲ್ಲ.

ರಾಷ್ಟ್ರದ ಅಭಿವೃದ್ಧಿಯಾದಂತೆ, ಬ್ಯಾಂಕುಗಳ ಸಂಖ್ಯೆಯೂ ಕಾರ್ಯಾಚರಣೆಯ ಪ್ರಮಾಣವೂ ವಿಸ್ತೃತವಾಗುತ್ತ ಹೋಗುತ್ತವೆ. ಅಭಿವೃದ್ಧಿಯ ಸಮಸ್ಯೆಗಳನ್ನು ಬ್ಯಾಂಕುಗಳ ಆಡಳಿತ ವರ್ಗ ಧೈರ್ಯದಿಂದ ಮತ್ತು ಮಾನವೀಯತೆಯಿಂದ ಎದುರಿಸಬೇಕಾಗಿದೆ.

---

## ನಿಮ್ಮವಳೇ !

ಮ್ಯಾನೇಜರ್ ಹೆಸರಿಗೆ ಕಾಗದವೊಂದು ಬಂದಿತ್ತು. ತನ್ನ ಖಾತೆಯಲ್ಲಿ ಹಣ ಎಷ್ಟಿದೆ ತಿಳಿಸಿ ಅಂತ ದೂರದ ಊರಿನಿಂದ ಹೆಂಗಸೊಬ್ಬಳು ಬರೆದ ಕಾಗದ ಅದು. ಪತ್ರಗಳನ್ನು ಬರೆದು ಆಕೆಗೆ ಅಭ್ಯಾಸವಿಲ್ಲ ಅಂತ ಕಾಣುತ್ತದೆ. ಶುದ್ಧ ಕನ್ನಡದಲ್ಲೇ ಬರೆದಿದ್ದಳು. ಬ್ಯಾಂಕ್ ಅಧಿಕಾರಿಯೊಬ್ಬರು ಆ ಕಾಗದ ಓದಿ ನಗುತ್ತ, ಮ್ಯಾನೇಜರ್ ಕಡೆಗೆ ತಿರುಗಿ, "ಏನ್ಸಾರ್ ಸಮಾಚಾರ ? ಯಾವಾಗಿನಿಂದ ಶುರು ಆದ್ದು ? ನಮ್ಗೆ ಹೇಳಲೇ ಇಲ್ವಲ್ಲ. ಸಾರ್! ಅಂದರು. ಅವರ ಮಾತು ಕೇಳಿ ಮ್ಯಾನೇಜರ್ ಆದಿಯಾಗಿ ಎಲ್ಲರೂ ಕಕ್ಕಾಬಿಕ್ಕಿಯಾದರು. ವಿಷಯ ಏನೆಂದು ಮ್ಯಾನೇಜರಿಗೆ ತಿಳಿಯುವ ಮೊದಲೇ ಇತರರೆಲ್ಲರಿಗೂ ಗೊತ್ತಾಗಿ ಇಡೀ ಬ್ಯಾಂಕೇ ನಗೆಗಡಲಲ್ಲಿ ಮುಳುಗಿತು.

ಮ್ಯಾನೇಜರರು ಕೂಡಲೇ ಪತ್ರವನ್ನು ಕಸಿದುಕೊಂಡು ಪುನಃ ಓದತೊಡಗಿದರು. ಈ ಸಾರಿ ಅವರೂ ನಗಬೇಕಾಯಿತು. ಕಾರಣ ಇಷ್ಟೇ : ಕಾಗದ ಬರೆದ ಹೆಂಗಸು ತಾನು ಬರೆಯಬೇಕಾದ್ದನ್ನೆಲ್ಲಾ ಬರೆದು, "ಇತಿ ನಿಮ್ಮವಳಾದ" ಎಂದು ಪತ್ರವನ್ನು ಮುಗಿಸಿದ್ದಳು !

**ಪು. ರಾ. ಮುರಳೀಧರ, ಕೆನರಾ ಬ್ಯಾಂಕ್, ಹುಳಿಯಾರು**

---

# ಭಾರತದ ಅರ್ಥವ್ಯವಸ್ಥೆಯಲ್ಲಿ ಗ್ರಾಮ ಕೈಗಾರಿಕೆ

ಟಿ. ಎಂ. ಪಂಡಿತ

ಹೆಸರಾಂತ ವಾಣಿಜ್ಯೋದ್ಯಮಿ ಹಾಗೂ ಅರ್ಥಶಾಸ್ತ್ರಜ್ಞ ಹೆನ್ರಿ ಫೋರ್ಡರು ಬೃಹದ್ಗಾತ್ರದ ಮೋಟಾರು ಕಾರ್ಖಾನೆಯೊಂದನ್ನು ಸ್ಥಾಪಿಸಿದರು. ಕಾರ್ಖಾನೆಯ ಜೊತೆಗೆ ಅಲ್ಲಿ ನಗರವೂ ಬೃಹದಾಕಾರದಲ್ಲಿ ಬೆಳೆಯಿತು. ಅನಾರೋಗ್ಯಕರವಾದ ಅನೇಕ ಕೊಳೆಗೇರಿಗಳು ಅಲ್ಲಿ ಮೇಲೆದ್ದುವು. ಅವುಗಳ ನೈರ್ಮಲ್ಯಸಾಧನೆಗೆ ಅಪಾರ ಹಣ ಬೇಕೆನಿಸಿತು. ಅದನ್ನು ಕಂಡು ಫೋರ್ಡರಿಗೆ ಬಲು ಚಿಂತೆಯುಂಟಾಯಿತು. ಬೃಹದ್ಗಾತ್ರದ ಕೆಲವೇ ಕೈಗಾರಿಕೆಗಳಿಗಿಂತ ಪುಟ್ಟ ಪುಟ್ಟ ಗ್ರಾಮ ಕೈಗಾರಿಕೆಗಳನ್ನು ಸಾಧ್ಯವಿದ್ದಲ್ಲೆಲ್ಲ ಸ್ಥಾಪಿಸುವುದರಿಂದ ಅಪಾರ ಬಂಡವಾಳದ ಹೂಡಿಕೆ ತಪ್ಪುವುದಲ್ಲದೆ ಕೈಗಾರಿಕಾ ಕ್ಷೇತ್ರದಲ್ಲಿ ಅನಾರೋಗ್ಯಕರವಾದ ಕೊಳೆಗೇರಿಗಳು ಬೆಳೆಯುವುದು ತಪ್ಪುವುದು ಎಂದು ತಮ್ಮ 'ಟುಡೇ ಅಂಡ್ ಟುಮಾರೋ' ಎಂಬ ಪುಸ್ತಕದಲ್ಲಿ ಅವರು ಬಹು ಮಾರ್ಮಿಕವಾಗಿ ವ್ಯಕ್ತಪಡಿಸಿದ್ದಾರೆ. ಹೆನ್ರಿ ಫೋರ್ಡರ ಈ ಮಾತು ಗ್ರಾಮ ಕೈಗಾರಿಕೆಗಳ ಹಿರಿಮೆಯನ್ನು ಎತ್ತಿ ತೋರಿಸುತ್ತದೆ. ಭಾರತದ ಆರ್ಥಿಕ ಹಾಗೂ ನೈತಿಕ ಪುನರುತ್ಥಾನದಲ್ಲಿ ಗ್ರಾಮ ಕೈಗಾರಿಕೆಗಳು ಬಹು ದೊಡ್ಡ ಕಾಣಿಕೆ ಸಲ್ಲಿಸಬಲ್ಲವು ಎಂಬುದು ನಿಸ್ಸಂಶಯ. ಭಾರತದ ಗ್ರಾಮೀಣ ಪ್ರದೇಶಗಳ ನಿರುದ್ಯೋಗ ಹಾಗೂ ಅರೆ ಉದ್ಯೋಗಗಳ ನಿವಾರಣೆಗೆ ಗ್ರಾಮ ಕೈಗಾರಿಕೆಗಳ ವಿಸ್ತೃತ ಅಭಿವೃದ್ಧಿ ಉತ್ತಮ ವ್ಯಾವಹಾರಿಕ ಮಾರ್ಗವಾಗಬಲ್ಲುದು.

ಮಾಡಬೇಕೆಂದಿರುವ ಕೆಲಸಕ್ಕೆ ತೀರ ಕೆಲವೇ ಕೈಗಳಿರುವಾಗ ಯಾಂತ್ರೀಕರಣ ಒಳ್ಳೆಯದು. ಭಾರತದಲ್ಲಿ ಬೇಕಾಗಿರುವುದಕ್ಕಿಂತ ಹೆಚ್ಚು ಕೈಗಳಿವೆ. ಹಳ್ಳಿಗಳಲ್ಲಿರುವ ಕೋಟಿಗಟ್ಟಲೆ ಜನರಿಗೆ ಕೆಲಸವಿಲ್ಲದ ವೇಳೆಯಲ್ಲಿ ಉದ್ಯೋಗದ ಆಸರೆ ಕೊಡುವ, ತನ್ಮೂಲಕ ಅವರ ಜೀವನ ಮಟ್ಟವನ್ನು ಏರಿಸುವ ಗ್ರಾಮ ಕೈಗಾರಿಕಾ ವ್ಯವಸ್ಥೆಗೆ ನಮ್ಮಲ್ಲಿ ಸಾಕಷ್ಟು ಅವಕಾಶವಿದೆ. ಮುಖ್ಯತಃ ಜನರಲ್ಲಿ ಶ್ರಮ ಗೌರವ ಹೆಚ್ಚಬೇಕು. ಮಹಾತ್ಮ ಗಾಂಧಿಯವರು ಒಂದೆಡೆ ನುಡಿದಂತೆ, ತಮ್ಮ ಕೈಕಾಲುಗಳನ್ನು ಬಳಸಿ ದುಡಿಯುವವರಿಗೆ ಭಾರತದಲ್ಲಿ ಸಾಕಷ್ಟು ಉದ್ಯೋಗವಿದೆ. ದೇವರು ಪ್ರತಿಯೊಬ್ಬರಿಗೂ ದುಡಿಯುವ ಸಾಮರ್ಥ್ಯವನ್ನು ಹಾಗೂ ತನಗೆ ಅವಶ್ಯವಿರುವ 'ಅನ್ನ'ಕ್ಕಿಂತ ಮೀರಿ ಗಳಿಸುವ ಶಕ್ತಿಯನ್ನು ಕೊಟ್ಟಿದ್ದಾನೆ. ಪ್ರಾಮಾಣಿಕವಾಗಿ ದ್ರವ್ಯ ಗಳಿಸಬಯಸುವವರಿಗೆ ಯಾವ ಕೆಲಸವೂ ಕೀಳಲ್ಲ. ನಿರುದ್ಯೋಗ ಹಾಗೂ ದಾರಿದ್ರ್ಯದಿಂದ ನೊಂದವರು ಕೈಮಗ್ಗಗಳಿಂದ ಬಟ್ಟೆ ತಯಾರಿಸುವುದು, ಬತ್ತ ಕುಟ್ಟುವುದು, ಚರ್ಮ ಹದ ಮಾಡುವುದು, ಸಾಬೂನು ತಯಾರಿಕೆ, ಕಂಚು ಶ್ರೀಗಂಧ ದಂತಗಳನ್ನು ಬಳಸಿ ವಿಗ್ರಹಗಳನ್ನೂ ಚಿತ್ರ ಫಲಕಗಳನ್ನೂ ತಯಾರಿಸುವದು, ಗಾಣಗಳಿಂದ ಎಣ್ಣೆ ತೆಗೆಯುವುದು ಮುಂತಾದ ಗ್ರಾಮ ಕೈಗಾರಿಕೆಗಳನ್ನು ಕೈಗೊಂಡು ತಮ್ಮ ಆದಾಯವನ್ನು ಹೆಚ್ಚಿಸಿಕೊಳ್ಳಬಹುದು. ಗೃಹ ಕೈಗಾರಿಕೆಗಳ ದುಡಿಮೆಗಾರರಂತೂ ತಮ್ಮ ಮನೆಯಲ್ಲಿಯೇ ಕುಳಿತು ಕಾರ್ಯ ನಿರ್ವಹಿಸಬಹುದು. ಮನೆಯ ವಾತಾವರಣ ಇವರ ಕೆಲಸಕ್ಕೆ ಅನುಕೂಲವಾಗಿರುತ್ತದೆ. ಕುಟುಂಬದ ಜನರು ಕಾರ್ಯ ನಿರ್ವಹಣೆಗೆ ಸಹಾಯಕರಾಗಿ ಬಂದೊದಗುತ್ತಾರೆ. ಇಡೀ ಮನೆಯೇ ಉತ್ಪಾದನೆಯಲ್ಲಿ ಮಗ್ನವಾಗುತ್ತದೆ.

## ಸಾಧಕಾಂಶಗಳು

ಗ್ರಾಮ ಕೈಗಾರಿಕೆಗಳಲ್ಲಿಯ ಸಾಧಕಾಂಶಗಳನ್ನು ಚತುರ್ವಿಧವಾಗಿ ವಿಂಗಡಿಸಬಹುದು:

1 ಮೊದಲನೆಯದಾಗಿ ಗ್ರಾಮ ಕೈಗಾರಿಕೆಗಳು ಅನೇಕ ಜನರಿಗೆ ಉದ್ಯೋಗಾವಕಾಶವನ್ನು ಕಲ್ಪಿಸಿಕೊಡುವುವು. ಬೃಹತ್ ಕೈಗಾರಿಕೆಯಲ್ಲಿ ಯಂತ್ರಗಳ ಬಳಕೆ ಹೆಚ್ಚು. ಜನರಿಗೆ ಕೆಲಸ ಕಡಿಮೆ. ಗ್ರಾಮ ಕೈಗಾರಿಕೆಗಳು ಉದ್ಯೋಗಾವಕಾಶವನ್ನು ಹೆಚ್ಚಿಸುವುವಲ್ಲದೆ ಕೈಗಾರಿಕೆಗಳ ವಿಕೇಂದ್ರೀಕರಣಕ್ಕೆ ನೆರವಾಗುತ್ತವೆ. ಭಾರತದಂಥ ಬೃಹತ್ ಜನಸಂಖ್ಯೆಯಿರುವ ದೇಶದಲ್ಲಿ ಯಾಂತ್ರೀಕರಣ ನಿರುದ್ಯೋಗ ಸಮಸ್ಯೆಯನ್ನು ತೀವ್ರಗೊಳಿಸುವುದೇ ವಿನಾ ಅದನ್ನು ಶಮನಗೊಳಿಸಲಾರದು. ಭಾರತದ ಬಟ್ಟೆ ಉದ್ಯಮದಲ್ಲಿ, ನೂಲು ನೇಯುವ ಗಿರಣಿಗಳಲ್ಲಿ ಸಾವಿರಾರು ಕೋಟಿ ರೂಪಾಯಿಗಳ ಬಂಡವಾಳ ತೊಡಗಿಸಿದ್ದರೂ ಅಲ್ಲಿ 15

ಲಕ್ಷಕ್ಕಿಂತ ಹೆಚ್ಚು ಜನರಿಗೆ ಉದ್ಯೋಗಾವಕಾಶವಿಲ್ಲ. ಕೇವಲ ರೂ. 50 ಕೋಟಿ ಬಂಡವಾಳ ತೊಡಗಿಸಿರುವ ಖಾದಿ ಉದ್ಯಮದಲ್ಲಿ 5 ಲಕ್ಷಕ್ಕಿಂತ ಹೆಚ್ಚು ಜನರಿಗೆ ಕೂಲಿ ದೊರೆಯುತ್ತದೆ.

2 ಗ್ರಾಮ ಕೈಗಾರಿಕೆ ಕೃಷಿಗೆ ಪೂರಕವಾಗಬಲ್ಲ ಸರಳ ಉದ್ಯೋಗವಾಗಿರುತ್ತದೆ. ಹೊಲಗಳಲ್ಲಿ ದುಡಿಯುವ, ವರ್ಷದಲ್ಲಿ ಕನಿಷ್ಠ ನಾಲ್ಕು ತಿಂಗಳು ಯಾವ ಉದ್ಯೋಗವೂ ಇಲ್ಲದ ಶೇಕಡ 80ರಷ್ಟು ರೈತರಿಗೆ ಗ್ರಾಮಕೈಗಾರಿಕೆಗಳು ಅತ್ಯಂತ ಸಮರ್ಪಕವಾದ ಆರ್ಥಿಕ-ವ್ಯವಹಾರ್ಯ ಕ್ರಮ.

3 ಗ್ರಾಮ ಕೈಗಾರಿಕೆಗಳು ಕಲಿಯಲು ಸುಲಭವಾದವು ಗಳು.

4 ಗ್ರಾಮ ಕೈಗಾರಿಕೆಗಳಿಗೆ ವಿಶೇಷ ಬಂಡವಾಳ ಬೇಕಿಲ್ಲ. ವ್ಯವಸ್ಥಾ ವೆಚ್ಚ ಕೂಡ ಕಡಿಮೆ.

5 ಗ್ರಾಮ ಕೈಗಾರಿಕೆಗಳಲ್ಲಿ ಅನೇಕ ಕರ-ಕುಶಲ ಉದ್ಯಮ ಗಳೂ ಸೇರಿರುವುದರಿಂದ ಅವನ್ನು ಪುನರುಜ್ಜೀವನಗೊಳಿಸು ವುದರ ಮುಖೇನ ರಾಷ್ಟ್ರದ ಅಭಿವೃದ್ಧಿ ಯೋಜನೆಗಳ ಅನುಷ್ಠಾನಕ್ಕೆ ಅಗತ್ಯವಾದ ವಿದೇಶಿ ವಿನಿಮಯವನ್ನೂ ನಾವು ಗಳಿಸಬಹುದು. ಸಾವಿರಾರು ವರ್ಷಗಳಿಂದ ನಮ್ಮ ರೈತಾಪಿ ಜನರೂ ಇತರ ಗ್ರಾಮನಿವಾಸಿಗಳೂ ಹತ್ತಿ, ಉಣ್ಣೆ, ರೇಷ್ಮೆ ಮುಂತಾದ ಗ್ರಾಮೋದ್ಯೋಗಗಳ ಜತೆಯಲ್ಲಿ ಕಂಚು, ಹಿತ್ತಾಳೆ, ತಾಮ್ರ, ಬೆಳ್ಳಿ, ಬಂಗಾರ, ಶ್ರೀಗಂಧ ಮುಂತಾದ ಪದಾರ್ಥಗಳಿಂದ ವಿಗ್ರಹಗಳನ್ನು ಕೆತ್ತುವುದನ್ನೂ ಕರಕೌಶಲದ ಅನೇಕ ಸುಂದರ ವಸ್ತುಗಳನ್ನು ತಯಾರು ಮಾಡುವುದನ್ನೂ ಪಾರಂಪರಿಕವಾಗಿ ನಡೆಸಿಕೊಂಡು ಬರು ತ್ತಿದ್ದಾರೆ.

ನಮ್ಮ ಕೈಗಾರಿಕೆಗಳಲ್ಲಿ ಬಹು ಪ್ರಾಮುಖ್ಯ ಪಡೆದಿರು ವಂಥವು ಇವು: 1 ಖಾದಿ (ಇದರಲ್ಲಿ ಅಂಬರ್ ಚರಕ ಸೇರಿದೆ), 2 ಕೈಮಗ್ಗದ ಕೈಗಾರಿಕೆ (ಇದರಲ್ಲಿ ಹತ್ತಿ, ಉಣ್ಣೆ ಮತ್ತು ರೇಷ್ಮೆ ಉದ್ಯೋಗಗಳೂ ಸೇರಿವೆ), 3 ಕೈಕಾಗದ ತಯಾರಿಕೆ, 4 ಜೇನು ಸಾಕಣೆ, 5 ಬೆಲ್ಲ ತಯಾರಿಕೆ, 6 ಚರ್ಮೋದ್ಯೋಗ, 7 ಗೋಬರ್ ಗ್ಯಾಸ್ ಸ್ಥಾವರ, 8 ಚಾಪೆ ಹೆಣೆಯುವುದು, 9 ಕುಂಭೋದ್ಯಮ-ಕುಂಬಾರಿಕೆ, 10 ಸುಣ್ಣ ತಯಾರಿಕೆ, 11 ಸಾಬೂನು ತಯಾರಿಕೆ, 12 ಕತ್ತದ ಕೈಗಾರಿಕೆ—ಹಗ್ಗ ಇತ್ಯಾದಿ, 13 ಒಲೆಯ ತಯಾರಿಕೆ, 14 ಬತ್ತ ಕುಟ್ಟುವುದು.

ನಿರುದ್ಯೋಗ ಮತ್ತು ಅರೆ ಉದ್ಯೋಗ ಇಂದು ಹೆಚ್ಚಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಕಂಡುಬರುವ ಮುಖ್ಯ ಸಮಸ್ಯೆ ಯಾಗಿದೆ. ಈ ಸಮಸ್ಯೆಯ ಬಹುಮಟ್ಟಿನ ನಿವಾರಣೆಯನ್ನು ಗ್ರಾಮ ಕೈಗಾರಿಕೆಗಳ ಅಭಿವೃದ್ಧಿಯಿಂದ ಸಾಧಿಸಬಹುದು. ಗ್ರಾಮ ಕೈಗಾರಿಕೆಗಳನ್ನು ಪ್ರೋತ್ಸಾಹಿಸಿ ಅವನ್ನು ಅಭಿವೃದ್ಧಿ ಪಡಿಸಿ ತನ್ಮೂಲಕ ಹೆಚ್ಚಿನ ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಡುವಲ್ಲಿ ನಮ್ಮ ಪಂಚವಾರ್ಷಿಕ ಯೋಜನೆಗಳು ಅನೇಕ ಕ್ರಮಗಳನ್ನು ಕೈಗೊಳ್ಳುತ್ತಲಿವೆ. ಆದರೂ ದೇಶದ ಸಮಗ್ರ ಗ್ರಾಮ ಜನಸಂಖ್ಯೆ ಹಾಗೂ ಶ್ರಮಶಕ್ತಿಗಳನ್ನು ವಿವೇಚಿಸಿದಾಗ ಸಾಧಿಸಿದ ಪ್ರಗತಿ ಸಾಲದು ಎಂಬುದು ಬೇಗನೆ ತಿಳಿಯುವ ವಿಷಯವಾಗಿದೆ. ಬಹಳಷ್ಟು ಕೈಗಾರಿಕೆ ಗಳಿಗೆ ಸರಕಾರದಿಂದ ಸಿಗುವ ಸಹಾಯಧನವೇ ಊರು ಗೋಲಾಗಿದೆ. ಅಲ್ಲದೆ ಅಲ್ಲಿ ಕೆಲಸಗಾರರಿಗೆ ಕೊಡುವ ದಿನಸಿತ್ಯದ ಸಂಬಳ ಸಹ ಅತಿ ಕಡಿಮೆಯಾಗಿರುತ್ತದೆ. ಖಾದಿ ಮತ್ತು ಗ್ರಾಮೋದ್ಯೋಗ ಸಮಿತಿ ವೀಕ್ಷಿಸಿದಂತೆ ಖಾದಿ ಉದ್ಯಮದಿಂದ ಮಧ್ಯಮ ವರ್ಗದ ಕುಟುಂಬಗಳು ಮಾತ್ರ ಪ್ರಯೋಜನ ಪಡೆಯುತ್ತಲಿವೆ. ಹೀಗಾಗಬಾರದು. ಗ್ರಾಮ ಕೈಗಾರಿಕೆಗಳ ಪ್ರಯೋಜನಗಳು ಅವಶ್ಯವಿರುವ ಗ್ರಾಮೀಣ ಜನರಿಗೆಲ್ಲ ದೊರೆಯುವಂತಾಗಬೇಕು. ಗ್ರಾಮ ಕೈಗಾರಿಕೆಗಳಿಗೆ, ಅವುಗಳಲ್ಲಿ ನಿರತರಾದವರಿಗೆ ಸರಿಯಾದ, ಪ್ರಾಮಾಣಿಕವಾದ ಮಾರ್ಗದರ್ಶನ ಸಿಗಬೇಕು. ತಂತ್ರ ವಿಧಾನಗಳಲ್ಲಿ ಸೂಕ್ತ ಸುಧಾರಣೆ ಆಗಬೇಕು. ಸಿದ್ಧಪಡಿಸಿದ ವಸ್ತುಗಳು ಹೆಚ್ಚು ಹೆಚ್ಚು ಕಲಾತ್ಮಕವಾಗಿರಬೇಕು. ದುಡಿ ಮೆಗೆ ತಕ್ಕ ಪ್ರತಿಫಲ ದೊರೆಯಬೇಕು. ಉತ್ಪಾದನ ಸಾಮರ್ಥ್ಯ ಪ್ರವರ್ಧಿಸುತ್ತಿರಬೇಕು. ಕಾರ್ಯ ನಿರ್ವಹಣೆಯ ಕಾಲಕ್ಕೆ ಸರಿಯಾಗಿ ಸುಲಭ ದರದಲ್ಲಿ ಹಣಕಾಸಿನ ಸಂಸ್ಥೆ ಗಳಿಂದ ಹಣದ ಒದಗಣೆಯಾಗಬೇಕು. ಗ್ರಾಮ ಕೈಗಾರಿಕೆ ಗಳಿಂದ ತಯಾರಿಸಲಾಗುವ ಕೆಲವು ಸರಕುಗಳನ್ನು ಬೃಹತ್ ಕೈಗಾರಿಕೆಗಳು ತಯಾರಿಸಲು ಅವಕಾಶ ಕೊಡದಂತೆ ಶಾಸನೋ ಲ್ಲಿಖಿತವಾಗಿ ಕೆಲವೊಂದು ಯಾಂತ್ರಿಕ ಉದ್ಯಮಗಳಿಗೆ ಗಟ್ಟಿಯ ನಿರ್ಬಂಧ ಹಾಕಬೇಕು. ಇವೆಲ್ಲ ಅಂಶಗಳಿಂದ ಕೂಡಿರುವ ಗ್ರಾಮ ಕೈಗಾರಿಕೆಗಳು ಗ್ರಾಮ ಸಂಪತ್ತನ್ನು ಹೆಚ್ಚಿ ಸಲು ತುಂಬ ಸಹಾಯಕವಾಗಬಲ್ಲವು. ಇನ್ನೊಂದು ಮುಖ್ಯ ವಾದ ಸಂಗತಿಯೆಂದರೆ ದಕ್ಷವಾಗಿ, ಪ್ರಾಮಾಣಿಕವಾಗಿ, ಸೇವಾ ಮನೋಭಾವದಿಂದ ಹಾಗೂ ಶ್ರದ್ಧೆಯಿಂದ ಗ್ರಾಮಾಂತರ ಪ್ರದೇಶಗಳಲ್ಲಿ ದುಡಿಯಬಲ್ಲ ಕಾರ್ಯಕರ್ತರ ನೆರವು ನಮ್ಮ ರೈತರಿಗೆ ಇಂದು ತುಂಬ ಅಗತ್ಯ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಯಾವ ಯೋಜನೆಯೇ ಆಗಲಿ ಯಶಸ್ವಿ ಯಾಗಿ, ಸಮರ್ಥವಾಗಿ ಅನುಷ್ಠಾನಕ್ಕೆ ಬರಬೇಕಾದರೆ, ಯೋಜನೆಯ ಸಂಪೂರ್ಣ ಪ್ರಯೋಜನ ಲಭಿಸುವಂತೆ ಆಗ ಬೇಕಾದರೆ ದಕ್ಷರೂ ನಿಸ್ಪೃಹತೆಯಿಂದ ಕೆಲಸ ಮಾಡ ತಕ್ಕವರೂ ಹೆಚ್ಚಿನ ಸಂಖ್ಯೆಯಲ್ಲಿ ಮುಂದೆ ಬರಬೇಕು.

# ಸ್ವದೇಶಿ ಕೈಗಾರಿಕೆಗಳ ಸಂರಕ್ಷಣೆ

ಬಿ. ಎಂ. ಶಿವಸ್ವಾಮಿ

ಸ್ವದೇಶಿ ಕೈಗಾರಿಕೆಗಳ ಸಂರಕ್ಷಣೆಯ ವಾದ (ಪ್ರೊಟೆಕ್ಷನಿಸಮ್) ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಬಹಳ ಮಹತ್ತ್ವ ಪಡೆದಿದೆ. ಸಂರಕ್ಷಣೆ, ಮುಕ್ತ ವ್ಯಾಪಾರ ಇವೆರಡರ ಪರ ಮತ್ತು ವಿರೋಧವಾದ ವಾದಗಳು ಆಲ್‌ಫ್ರೆಡ್ ಮಾರ್ಷಲ್ ಕಾಲದಿಂದಲೂ ನಡೆದಿವೆ, ಇಂದಿಗೂ ನಡೆಯುತ್ತಿವೆ. ಮುಕ್ತ ವ್ಯಾಪಾರ ಅಂತರರಾಷ್ಟ್ರೀಯ ಮಟ್ಟದಲ್ಲಿ ನಡೆಯುವುದರಿಂದ ವ್ಯಾಪಾರಮಾಡುವ ರಾಷ್ಟ್ರಗಳಿಗೆ ದೊರಕುವ ಲಾಭ ಹಾಗೂ ಉಪಯೋಗಗಳನ್ನು ಮೊದಲು ವಿವರಿಸಿದವರೆಂದರೆ ಡೇವಿಡ್ ರಿಕಾರ್ಡೋ, ಆಲ್‌ಫ್ರೆಡ್ ಮಾರ್ಷಲ್ ಹಾಗೂ ಜೆ. ಎಸ್. ಮಿಲ್. ಒಂದು ಆರ್ಥಿಕ ವ್ಯವಸ್ಥೆ ಮುಕ್ತವಾಗಿದ್ದಷ್ಟೂ ಆದಾಯ ಹೆಚ್ಚು, ಹಾಗೂ ಅಭಿವೃದ್ಧಿಯ ದರ ವೇಗಗೊಳ್ಳುತ್ತದೆ ಎಂದು ಈ ಮೂವರು ಅರ್ಥಶಾಸ್ತ್ರಜ್ಞರೂ ಹೇಳಿದ್ದಾರೆ. ಮುಕ್ತ ವ್ಯಾಪಾರ ವ್ಯವಸ್ಥೆಯಿಂದ ವಿವಿಧ ದೇಶಗಳು ವಿವಿಧ ಸರಕುಗಳ ಉತ್ಪಾದನೆಯಲ್ಲಿ ವಿಶೇಷಜ್ಞತೆ ಗಳಿಸಲು ಸಾಧ್ಯ ಎಂದು ತೋರಿಸಿಕೊಟ್ಟಿದ್ದಾರೆ.

ಸಂರಕ್ಷಣ ಕ್ರಮಗಳು ಎಲ್ಲ ದೇಶಗಳಲ್ಲೂ ಒಂದಲ್ಲ ಒಂದು ವಿಧದಲ್ಲಿ ಇದ್ದೇ ಇರುವುದನ್ನು ಇಂದು ನಾವು ಗಮನಿಸಬಹುದು. ಈ ಕ್ರಮಗಳು ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಅಧಿಕವಾಗಿವೆ. ಸಂರಕ್ಷಣ ಕ್ರಮಗಳನ್ನು ಮುಂದುವರಿದ ದೇಶಗಳಲ್ಲಿ 1930ರ ದಶಕದಲ್ಲಿ ತೆಗೆದುಕೊಳ್ಳಲಾಯಿತು. ಇದಕ್ಕೆ ಕಾರಣಗಳಿಲ್ಲದಿಲ್ಲ. 1920–30ರ ಭಾರಿ ಮುಗ್ಗಟ್ಟು, ಯುದ್ಧದ ಫಲವಾದ ಆರ್ಥಿಕ ಏರುಪೇರುಗಳು—ಇವುಗಳ ಅನಂತರದ ವರ್ಷಗಳಲ್ಲಿ ಈ ದೇಶಗಳು ಸಂರಕ್ಷಣ ಕ್ರಮಗಳನ್ನು ಬಹಳ ಮಟ್ಟಿಗೆ ಸಡಿಲಗೊಳಿಸಿದುವು, ಅಥವಾ ರದ್ದುಗೊಳಿಸಿದುವು. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಇದಕ್ಕೆ ವಿರುದ್ಧವಾದ ನೀತಿಯನ್ನು ನಾವು ಕಾಣುತ್ತೇವೆ.

ಸಂರಕ್ಷಣವಾದವನ್ನು ಬೌದ್ಧಿಕ ಮಟ್ಟದಲ್ಲಿ ಪ್ರಥಮ ಬಾರಿಗೆ ಮಂಡಿಸಿದವರು ರಾಲ್ ಪ್ರೆಬಿಷ್ ಮತ್ತು ಹ್ಯಾನ್ಸ್ ಸಿಂಗರ್. ಈ ಇಬ್ಬರು 1940ರ ದಶಕದಲ್ಲಿ ಸಂರಕ್ಷಣವಾದವನ್ನು ಪ್ರತಿಪಾದಿಸಿದರು. ಪ್ರೆಬಿಷ್ ಹಾಗೂ ಸಿಂಗರು ತಮ್ಮ ಪ್ರತಿಪಾದನೆಯನ್ನು ಸಾಕ್ಷ್ಯಾಧಾರ ಸಹಿತವಾಗಿ ಮುಂದಿಟ್ಟರು. ಇವರು 1876ರಿಂದ 1946ರ ವರೆಗಿನ ಅಂತರರಾಷ್ಟ್ರೀಯ ವ್ಯಾಪಾರವನ್ನು ಅಧ್ಯಯನ ಮಾಡಿ ಸಾಕ್ಷ್ಯಗಳನ್ನು ಸಂಗ್ರಹಿಸಿದ್ದಾರೆ. ಈ ಅವಧಿಯಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳು ಅಂತರರಾಷ್ಟ್ರೀಯ ವ್ಯಾಪಾರದಿಂದ ನಷ್ಟವನ್ನನುಭವಿಸಿವೆಯೆಂದು ತೋರಿಸಿದ್ದಾರೆ.

ಸಂರಕ್ಷಣವಾದದ ಪರವಾದ ಮುಖ್ಯ ಅಂಶಗಳೇನೆಂದರೆ, ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿನ ಕೈಗಾರಿಕೆಗಳ ಶೈಶವಾವಸ್ಥೆ ಮತ್ತು ಸ್ವಾವಲಂಬನೆಯ ಗುರಿ. ಪ್ರಾಥಮಿಕ ಉತ್ಪಾದನ ರಾಷ್ಟ್ರಗಳಲ್ಲಿನ ಕೈಗಾರಿಕೆಗಳು ಶೈಶವಾವಸ್ಥೆಯಲ್ಲಿರುವುದರಿಂದ, ಅವು ಅಂತರರಾಷ್ಟ್ರೀಯ ಮತ್ತು ಆಂತರಿಕ ಮಾರುಕಟ್ಟೆಯಲ್ಲಿನ ತೀವ್ರತರ ಪೈಪೋಟಿಯನ್ನು ಎದುರಿಸುವ ಸ್ಥಿತಿಯಲ್ಲಿಲ್ಲ. ಆದ್ದರಿಂದ ಈ ಕೈಗಾರಿಕೆಗಳ ಸಂರಕ್ಷಣೆ ಅಲ್ಲಿಯ ಸರ್ಕಾರಗಳ ಆದ್ಯ ಕರ್ತವ್ಯ ಹಾಗೂ ಜವಾಬ್ದಾರಿಯಾಗಿರುತ್ತದೆ. ಇಲ್ಲಿ ಏಳುವ ಒಂದು ಪ್ರಶ್ನೆ ಎಂದರೆ, ಶೈಶವಾವಸ್ಥೆ ಎಲ್ಲಿಯವರೆಗೆ ಮುಂದುವರಿಯುತ್ತದೆ ಮತ್ತು ಇದಕ್ಕೆ ಕೊನೆ ಎಲ್ಲಿ ಎನ್ನುವುದು. ಸಂರಕ್ಷಣೆಯ ಕ್ರಮಗಳು ಜಾರಿಯಲ್ಲಿರುವ ವರೆಗೆ ಈ ಕೈಗಾರಿಕೆಗಳು ಪೈಪೋಟಿ ಮನೋಭಾವವನ್ನು ಬೆಳಸಿಕೊಳ್ಳಲು ಪ್ರಯತ್ನಪಡುವುದಿಲ್ಲವಾದ್ದರಿಂದ ಆದಷ್ಟು ಬೇಗನೆ ಸಂರಕ್ಷಣ ಕ್ರಮಗಳನ್ನು ಸಡಿಲಗೊಳಿಸುವುದು ಎಲ್ಲ ರೀತಿಯಿಂದ ಸೂಕ್ತ. ಸಂರಕ್ಷಣೆಯಿಂದ ಸ್ವಾವಲಂಬನೆ ಸ್ವಲ್ಪ ಮಟ್ಟಿಗೆ ಸಾಧ್ಯ. ಆದರೆ ಅದಕ್ಕೆ ತೆರಬೇಕಾದ ಬೆಲೆ ಅಧಿಕ. ಉದಾಹರಣೆಗೆ ಒಂದು ವಸ್ತುವಿನ ಬೆಲೆ ಅಂತರರಾಷ್ಟ್ರೀಯ ಮಟ್ಟದಲ್ಲಿ ಕಡಿಮೆ ದರದಲ್ಲಿ ದೊರೆಯುವುದಾದರೆ ಅದನ್ನು ಹೆಚ್ಚು ಖರ್ಚಿನಲ್ಲಿ ದೇಶದಲ್ಲಿಯೇ ಉತ್ಪಾದಿಸುವುದು ಬುದ್ಧಿವಂತಿಕೆಯ ಲಕ್ಷಣವಾಗುವುದಿಲ್ಲ.

**ಸಂರಕ್ಷಣೆಯ ವಿಧಾನಗಳು**

ಸಂರಕ್ಷಣೆಯ ಕ್ರಮಗಳನ್ನು ನಾನಾ ವಿಧದಲ್ಲಿ ಅಳವಡಿಸು

ವುದುಂಟು. ಇವುಗಳಲ್ಲಿ ಎರಡು ವಿಧ. ಒಂದನೆಯದು ಆಮದು ನಿಲ್ಲಿಸುವುದು ಮತ್ತು ಎರಡನೆಯದು ಆಮದು ತೆರಿಗೆ. ಮೊದಲನೆಯ ಕ್ರಮ ಪೈಪೋಟಿಯನ್ನು ತಡೆಗಟ್ಟುತ್ತದೆ, ಎರಡನೆಯದು ಕಡಿಮೆ ಮಾಡುತ್ತದೆ. ಇನ್ನೊಂದು ಕ್ರಮವೆಂದರೆ ಹಸುಗೆ (ಕೋಟಾ) ಪದ್ಧತಿ. ಇದರಲ್ಲಿ ವಿವಿಧ ರಾಷ್ಟ್ರಗಳ ನಡುವೆ ಒಂದು ಒಪ್ಪಂದದ ಪ್ರಕಾರ ಆಮದು ಮತ್ತು ರಫ್ತಿನ ಪ್ರಮಾಣಗಳನ್ನು ನಿಗದಿಪಡಿಸಲಾಗುತ್ತದೆ. ಈ ಕರಾರುಗಳು ಬಹಳಷ್ಟು ಮಟ್ಟಿಗೆ ಮುರಿಯಲ್ಪಟ್ಟು ಅಂತ್ಯಗೊಳ್ಳುತ್ತವೆ. ಇದಕ್ಕೆ ಮುಖ್ಯ ಕಾರಣಗಳೆಂದರೆ, ಬೆಲೆಯಲ್ಲಿ ಉಂಟಾಗುವ ಹೆಚ್ಚಳ ಮತ್ತು ರಾಜಕೀಯ ಒತ್ತಡಗಳು. ಕುತೂಹಲದ ಸಂಗತಿಯೆಂದರೆ, ಬಹಳಷ್ಟು ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ರಫ್ತು ತೆರಿಗೆ ಜಾರಿಯಲ್ಲಿರುವುದು. ಇತ್ತೀಚಿನ ದಿನಗಳಲ್ಲಿ ಈ ರಾಷ್ಟ್ರಗಳಲ್ಲಿ ಕೈಗಾರಿಕೆಗಳು ಸ್ವಲ್ಪ ಮಟ್ಟಿಗೆ ಅಂತರರಾಷ್ಟ್ರೀಯ ಮಾರುಕಟ್ಟೆಯನ್ನು ಪ್ರವೇಶಿಸುವುದರಲ್ಲಿ ಸಫಲವಾಗಿವೆ. ಆದರೆ ರಫ್ತು ತೆರಿಗೆ ಹಾಗೂ ಇನ್ನಿತರ ರಫ್ತು ಹಿಡಿತಗಳಿಂದ ನಿರೀಕ್ಷಿತಮಟ್ಟದಲ್ಲಿ ಸಾಧನೆಯಾಗಿಲ್ಲದಿರುವುದು ಗಮನಾರ್ಹ. ರಫ್ತು ಮತ್ತು ಆಮದು ತೆರಿಗೆಯನ್ನು ವಿಧಿಸುವ ಮತ್ತೊಂದು ಉದ್ದೇಶವೆಂದರೆ ಇದರಿಂದ ಸರ್ಕಾರಕ್ಕೆ ದೊರೆಯುವ ಆದಾಯ. ರಫ್ತು ಉದ್ಯಮಗಳಿಗೆ ದೊರೆಯುವ ತೆರಿಗೆ ವಿನಾಯಿತಿ ಹಾಗೂ ಸಹಾಯಧನಗಳು ಒಂದು ಕಡೆ. ಹೆಚ್ಚು ತೆರಿಗೆ ಇನ್ನೊಂದು ಕಡೆ—ಈ ಎರಡೂ ಪರಸ್ಪರ ವಿರುದ್ಧ ದಿಕ್ಕಿನಲ್ಲಿ ಕೆಲಸ ಮಾಡುತ್ತವೆ.

### ವಿಶ್ವಸಂಸ್ಥೆಯ ವ್ಯಾಪಾರ ಮತ್ತು ಅಭಿವೃದ್ಧಿ ಸಮ್ಮೇಳನ

ವಿಶ್ವಸಂಸ್ಥೆಯ ವ್ಯಾಪಾರ ಮತ್ತು ಅಭಿವೃದ್ಧಿ ಸಮ್ಮೇಳನದಲ್ಲಿ ಚರ್ಚಿಸಲ್ಪಟ್ಟ ಮುಖ್ಯವಾದ ವಿಷಯವೆಂದರೆ, ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಸತತವಾಗಿ ಪ್ರತಿಕೂಲವಾಗಿರುವ ವ್ಯಾಪಾರ ಷರತ್ತುಗಳು. ವ್ಯಾಪಾರದಿಂದ ಅಭಿವೃದ್ಧಿ ಹೊಂದಬೇಕೇ ಹೊರತು ಪರರ ಸಹಾಯದಿಂದಲ್ಲ ಎಂದು ಈ ಸಮ್ಮೇಳನದಲ್ಲಿ ಪ್ರೆಬಿಷ್ ಮತ್ತು ಸಿಂಗರ್ ವಾದಿಸಿದರು. ಮುಂದುವರಿದ ರಾಷ್ಟ್ರಗಳು ಕೈಗಾರಿಕಾ ಪದಾರ್ಥಗಳ ಬೆಲೆಗಳನ್ನು ಬಹಳಷ್ಟು ಹೆಚ್ಚಿಸಿವೆ. ಆದರೆ ಅಭಿವೃದ್ಧಿಶೀಲ ರಾಷ್ಟ್ರಗಳು ರಫ್ತು ಮಾಡುವ ಪದಾರ್ಥಗಳ ಬೆಲೆ ಹೆಚ್ಚು ಕಡಿಮೆ ಒಂದೇ ಮಟ್ಟದಲ್ಲಿರುವುದನ್ನು ಎತ್ತಿ ಇವರು ತೋರಿಸಿದ್ದಾರೆ.

ಕೈಗಾರಿಕಾ ಸರಕುಗಳ ಬೆಲೆಗಳ ಹೆಚ್ಚಳಕ್ಕೆ ಸಮರ್ಥನೆಯಾಗಿ ಉನ್ನತಗೊಳ್ಳುತ್ತಿರುವ ಗುಣಮಟ್ಟವನ್ನು ತೋರಿಸಲಾಗುತ್ತಿದೆ. ಪ್ರಾಥಮಿಕ ಪದಾರ್ಥಗಳಾದ ಅದಿರು ಮತ್ತು ಕೃಷಿ ಉತ್ಪನ್ನಗಳಲ್ಲಿ ಗುಣಮಟ್ಟ ಒಂದೇ ರೀತಿಯಾಗಿರುವುದನ್ನು ಮುಂದುವರಿದ ರಾಷ್ಟ್ರಗಳು ಎತ್ತಿ ತೋರಿಸುತ್ತವೆ.

ವಿಶ್ವಸಂಸ್ಥೆಯ ವ್ಯಾಪಾರ ಮತ್ತು ಅಭಿವೃದ್ಧಿ ಸಮ್ಮೇಳನದ ನಾಲ್ಕನೆಯ ಮತ್ತು ಐದನೆಯ ಸುತ್ತಿನ ಮಾತುಕತೆಯ ಫಲವಾಗಿ ಅಭಿವೃದ್ಧಿಶೀಲ ರಾಷ್ಟ್ರಗಳು ಪ್ರತಿಕೂಲವಾಗುತ್ತಿರುವ ವ್ಯಾಪಾರ ಷರತ್ತುಗಳನ್ನು ತಡೆಹಿಡಿಯುವಲ್ಲಿ ಸ್ವಲ್ಪ ಮಟ್ಟಿಗೆ ಸಫಲವಾಗಿವೆ. ಅಷ್ಟೇ ಅಲ್ಲದೆ ರಫ್ತು ಮಾರುಕಟ್ಟೆಯನ್ನು ವಿಸ್ತರಿಸಲು ಸಾಧ್ಯವಾಗಿದೆ.

---

## ಯಾರ ಹೆಂಡತಿ ?

ವಾಯಿದೆ ಮುಗಿದುದರಿಂದ ಒತ್ತೆ ಇಟ್ಟ ಒಡವೆಗಳನ್ನು ಬಿಡಿಸಿಕೊಂಡು ಹೋಗಲು ರಂಗೇಗೌಡನ ಹೆಂಡತಿ ರಾಜಮ್ಮನಿಗೆ ಬ್ಯಾಂಕಿನಿಂದ ನೋಟೀಸು ಕಳುಹಿಸಲಾಗಿತ್ತು. ಕೆಲವೇ ದಿನಗಳಲ್ಲಿ ಆ ಕಾಗದ ಆಕೆಗೆ ತಲುಪದೇ ವಾಪಸ್ಸು ಬಂತು. ಕವರಿನ ಹಿಂದೆ ಅಂಚೆ ಪೇದೆ ಹೀಗೆ ಬರೆದಿದ್ದ: "ನೀವು ಬರೆದಿರುವ ವಿಳಾಸದ ಅರ್ಥವಾದರೂ ಏನು ?" ಮ್ಯಾನೇಜರ್ ಗಾಬರಿಯಿಂದ ವಿಳಾಸದ ಕಡೆ ಗಮನ ಹರಿಸಿದರು. ನಮ್ಮ ಟಪ್ಪಾಲು ಗುಮಾಸ್ತನ ತಪ್ಪಿನಿಂದಾಗಿ ವಿಳಾಸ ಹೀಗೆ ಬರೆಯಲಾಗಿತ್ತು:

ರಾಜಮ್ಮ
ವೈಫ್ ಆಫ್ ಪೇಟೆ ಬೀದಿ
ಹುಳಿಯಾರು.

ವೈಫ್ ಆಫ್ ಆದಮೇಲೆ ಆಕೆಯ ಗಂಡನ ಹೆಸರು ಬಿಟ್ಟುಹೋಗಿತ್ತು. ಖಾತೆ ಪುಸ್ತಕವನ್ನು ತೆರೆದು ನೋಡಿದಾಗಲೇ ತಿಳಿದಿದ್ದು—ಆಕೆ ರಂಗೇಗೌಡನ ಹೆಂಡತಿಯೇ ಹೊರತು ಇಡೀ ಪೇಟೆ ಬೀದಿಗಲ್ಲ ಎಂಬುದು.

**ಪು. ರಾ. ಮುರಲೀಧರ, ಕೆನರಾ ಬ್ಯಾಂಕ್, ಹುಳಿಯಾರು**

# ವೆಚ್ಚ ನಿರ್ಣಯ: ಒಂದು ಪರಿಚಯ

ಮೋ. ಕೃ. ಅನಂತಸ್ವಾಮಿ

ಕೈಗಾರಿಕಾ ಘಟಕಗಳಲ್ಲಿ ತಯಾರಾಗುವ ಉತ್ಪನ್ನಗಳ ಮಾರಾಟ ಬೆಲೆಯನ್ನು ನಿಗದಿ ಮಾಡುವುದು ಒಂದು ಗಹನವಾದ ತಾಂತ್ರಿಕ ಸಮಸ್ಯೆ. ಕೊಂಡು ಬಿಕರಿ ಮಾಡುವ ವರ್ತಕರಿಗೆ ಇದು ತೀರ ಸರಳ. ತಮಗೆ ಸೇಕಡ ಎಷ್ಟು ಲಾಭ ಬೇಕು ಎಂದು ನಿರ್ಧರಿಸಿದರೆ ಸಾಕು, ಬಿಕರಿ ಬೆಲೆ ಸಿದ್ಧ. ಒಂದು ಸರಕನ್ನು ರೂ. 20ಕ್ಕೆ ಕೊಂಡಿದ್ದು, ನಿರೀಕ್ಷಿತ ಲಾಭ ಸೇಕಡ 25 ಎನ್ನಿ, ಬಿಕರಿ ಬೆಲೆ ಎಷ್ಟಿರಬೇಕೆಂದು ಗಣಿತ ಬಲ್ಲ ಯಾವ ಹುಡುಗನಾದರೂ ಹೇಳಬಲ್ಲ.

ಕೈಗಾರಿಕಾ ಘಟಕ ಕೇವಲ ಒಂದು ಸರಕನ್ನು ತಯಾರಿಸುತ್ತಿದ್ದಲ್ಲಿ, ಬಿಕರಿ ಬೆಲೆಯ ನಿರ್ಣಯ ಸಮಸ್ಯೆಯಾಗುವುದಿಲ್ಲ. ಏಕೆಂದರೆ, ಒಟ್ಟು ಖರ್ಚನ್ನು ಉತ್ಪಾದಿತ ಸರಕಿನ ಸಂಖ್ಯೆಯಿಂದ ಭಾಗಿಸಿದರೆ, ಒಂದು ಸರಕಿಗೆ ತಗಲುವ ಉತ್ಪಾದನ ವೆಚ್ಚ ದೊರೆಯುತ್ತದೆ. ಅದಕ್ಕೆ ಲಾಭಾಂಶ ಸೇರಿಸಿದರೆ ಮುಗಿಯಿತು.

ಸಂಕೀರ್ಣತೆ ತಲೆದೋರುವುದು ಒಂದಕ್ಕಿಂತ ಹೆಚ್ಚು ಸರಕುಗಳನ್ನು ಉತ್ಪಾದನೆ ಮಾಡುತ್ತಿರುವಾಗ. ಉದಾಹರಣೆಗೆ ಎರಡು ಉತ್ಪನ್ನಗಳಿವೆಯೆಂದು ಭಾವಿಸೋಣ. ಒಂದು, ಸರಳವಾದ, ಒಂದೆರಡು ಘಟ್ಟಗಳಲ್ಲಿ ತಯಾರಾಗುವ ಸರಕು; ಇನ್ನೊಂದು, ತುಸು ಸಂಕೀರ್ಣವಾದ ಆರೇಳು ಘಟ್ಟಗಳ ಮೂಲಕ ಹಾದು ಹೊರಬರುವ ಸರಕು. ಒಟ್ಟು ಖರ್ಚನ್ನು ಈ ಎರಡು ಸರಕುಗಳ ಒಟ್ಟು ಸಂಖ್ಯೆಯಿಂದ ಭಾಗಿಸಿದಲ್ಲಿ ನಮಗೆ ದೊರಕುವುದು ಪೂರ್ಣ ನಿರರ್ಥಕವಾದ ಸರಾಸರಿ ವೆಚ್ಚ. ಅದನ್ನು ಆಧರಿಸಿ, ಲಾಭಾಂಶ ಸೇರಿಸಿ, ಬಿಕರಿ ಬೆಲೆಯನ್ನು ನಿಗದಿ ಮಾಡಿದಲ್ಲಿ, ಒಂದು ಸರಕಿನ ಬೆಲೆ ಅದರ ಮೌಲ್ಯಕ್ಕಿಂತ ಹೆಚ್ಚಾಗಿಯೂ, ಇನ್ನೊಂದು ಸರಕಿನ ಬೆಲೆ ಅದರ ಮೌಲ್ಯಕ್ಕಿಂತ ಕಡಿಮೆಯಾಗಿಯೂ ನಿಗದಿ ಮಾಡಲ್ಪಡುತ್ತವೆ. ಹಾಗಿದ್ದಲ್ಲಿ ಅವುಗಳ ಮೌಲ್ಯ ನಿರ್ಣಯವನ್ನು ಹೇಗೆ ಮಾಡಬೇಕು? ಸರಕುಗಳ ವೈವಿಧ್ಯ ಹೆಚ್ಚಿದಂತೆ ಈ ಸಮಸ್ಯೆ ಸಂಕೀರ್ಣಗೊಳ್ಳುತ್ತ ಹೋಗುತ್ತದೆ.

### ವೆಚ್ಚ ನಿರ್ಣಯದ ಹಂತಗಳು

ಸರಕುಗಳ ಬೆಲೆಗಟ್ಟುವಿಕೆಯ ಮೊದಲ ಹಂತ ವೆಚ್ಚ ನಿರ್ಣಯ. ವೆಚ್ಚ ನಿರ್ಣಯ ಶಾಸ್ತ್ರ (ಕಾಸ್ಟಿಂಗ್) ಕೈಗಾರಿಕಾ ಇಂಜಿನಿಯರಿಂಗ್‌ನಲ್ಲಿ ಬಹಳ ಪ್ರಾಮುಖ್ಯ ಪಡೆದಿದೆ. ಅದರ ಒಂದೆರಡು ಸೂತ್ರಗಳನ್ನು ಇಲ್ಲಿ ಪರಿಚಯಾತ್ಮಕವಾಗಿ ವಿವರಿಸಲಾಗಿದೆ.

ವೆಚ್ಚ ನಿರ್ಣಯದಲ್ಲಿ ಮೊದಲ ಹಂತವೆಂದರೆ ಕೈಗಾರಿಕೆಯ ಒಟ್ಟಾರೆ ಖರ್ಚಿನ ವಿಂಗಡಣೆ. ಖರ್ಚು ಬೇರೆ ಬೇರೆ ರೂಪಗಳಲ್ಲಿರುತ್ತದೆ. ಆ ರೂಪಗಳನ್ನು ಬೇರ್ಪಡಿಸಬೇಕು. ಪ್ರಮುಖವಾಗಿ ಎರಡು ವರ್ಗಗಳಾಗಿ ಖರ್ಚುಗಳನ್ನು ವಿಂಗಡಿಸಬಹುದು. ಒಂದು, ತಯಾರಿಕಾ ವೆಚ್ಚಗಳು. ಮತ್ತೊಂದು, ಆಡಳಿತಾತ್ಮಕ ವೆಚ್ಚಗಳು. ಈ ಎರಡು ವರ್ಗಗಳ ಖರ್ಚುಗಳನ್ನು ಉಪವರ್ಗಗಳಾಗಿ ವಿಂಗಡಿಸಬೇಕು. ತಯಾರಿಕಾ ವೆಚ್ಚಗಳಲ್ಲಿ ಮೂಲತಃ ಕಚ್ಚಾ ಸಾಮಗ್ರಿಯ ಖರ್ಚು, ಯಂತ್ರ ಚಾಲನೆಗೆ ಸಂಬಂಧಿಸಿದ ಖರ್ಚು, ಯಂತ್ರದಲ್ಲಿ ಸರಕುಗಳನ್ನು ರೂಪಿಸುವ ಉದ್ಯೋಗಿಗಳ ವೇತನ ಇತ್ಯಾದಿ. ಆಡಳಿತಾತ್ಮಕ ವೆಚ್ಚಗಳಲ್ಲಿ ಕಚೇರಿ ಸಿಬ್ಬಂದಿಯ ವೇತನ, ಕಚೇರಿ ಕಟ್ಟಡದ ಬಾಡಿಗೆ, ಮತ್ತು ಆಡಳಿತಕ್ಕೆ ಸಂಬಂಧಿಸಿದ ಇನ್ನಿತರ ಖರ್ಚುಗಳೆಲ್ಲ ಸೇರಿರುತ್ತವೆ.

ಈ ಖರ್ಚುಗಳನ್ನೆಲ್ಲ ಪಟ್ಟಿ ಮಾಡಿದ ಅನಂತರ ಇವನ್ನು ಬೇರೆ ಬೇರೆ ಉತ್ಪನ್ನಗಳಿಗೆ ಹಂಚಬೇಕು. 'ನೇರ' ಅಥವಾ ಪ್ರತ್ಯಕ್ಷ ವೆಚ್ಚವಾದ ಕಚ್ಚಾ ಸಾಮಗ್ರಿ ವೆಚ್ಚವನ್ನು ಸುಲಭವಾಗಿ ಗುರುತಿಸಿ ಪ್ರತಿ ಉತ್ಪನ್ನಕ್ಕೂ ಹಂಚಬಹುದು. ಎರಕದ ಮನೆಯ (ಫೌಂಡ್ರಿಯ) ಉದಾಹರಣೆ ತೆಗೆದುಕೊಂಡರೆ ಸಮಸ್ಯೆಯ ಕಲ್ಪನೆ ಸುಲಭ. ಐದು ವಿಧವಾದ ಪದಾರ್ಥಗಳು ತಯಾರಾಗುತ್ತವೆ ಎಂದು ಭಾವಿಸೋಣ. ಒಂದೊಂದೂ ಒಂದೊಂದು ಬಗೆಯ ಸಂಕೀರ್ಣತೆಯದಾಗಲಿ. ಅಂತಿಮವಾಗಿ ಹೊರಬರುವ ಎರಕದಲ್ಲಿ (ಕ್ಯಾಸ್ಟಿಂಗ್) ಕಚ್ಚಾ ಸಾಮಗ್ರಿಯ ಅಂಶ ಎಷ್ಟಿದೆಯೆಂಬುದನ್ನು ಅದನ್ನು ತೂಕ ಮಾಡುವುದರ ಮೂಲಕ ಸುಲಭವಾಗಿ ಕಂಡುಹಿಡಿಯಬಹುದು. (ಒಂದು ಸಾವಿರ ಗ್ರಾಂ ತೂಕದ ಎರಕ ತಯಾರಾಗಬೇಕಾದಲ್ಲಿ ಆ ತೂಕಕ್ಕಿಂತ

ತುಸು ಹೆಚ್ಚಾಗೇ ಬೀಡು ಕಬ್ಬಿಣ ಮತ್ತು ಇತರ ಧಾತುಗಳನ್ನು ಉಪಯೋಗಿಸಲಾಗುತ್ತದೆ. ಈ ಹೆಚ್ಚಳ ಎಷ್ಟೆಂದು ನಿಗದಿಮಾಡುವುದು ಸುಲಭ.) ಕಚ್ಚಾ ಎರಕ ತಯಾರಾದ ಅನಂತರ ಅದನ್ನು ಬೇರೆಬೇರೆ ಯಂತ್ರಗಳ ಸಹಾಯದಿಂದ ಇಚ್ಛಿತ ರೂಪಕ್ಕೆ ತರಬೇಕಾಗುತ್ತದೆ. ಯಾವುದೇ ಯಂತ್ರವನ್ನಾಗಲಿ ಒಂದು ಗಂಟೆಯ ಕಾಲ ಚಲಿಸಿದರೆ ಅದಕ್ಕೆ ತಗಲುವ ವೆಚ್ಚವನ್ನು ಯಂತ್ರ-ತಾಸು ದರ (ಮೆಷೀನ್-ಅವರ್ ರೇಟ್) ಎನ್ನುತ್ತಾರೆ. ಆ ದರದಲ್ಲಿ ಯಂತ್ರ ಚಾಲನೆಗೆ ಸಂಬಂಧಿಸಿದ ಎಲ್ಲ ಖರ್ಚುಗಳನ್ನೂ ಅಳವಡಿಸುತ್ತಿರುತ್ತಾರೆ. ಈ ಲೇಖನ ಪರಿಚಯಾತ್ಮಕವಾದುದರಿಂದ, ಯಂತ್ರ-ತಾಸು ದರದ ಲೆಕ್ಕಾಚಾರಕ್ಕೆ ಸಂಬಂಧಿಸಿದ ಸಂಕೀರ್ಣತೆಯನ್ನು ಇಲ್ಲಿ ಕೈ ಬಿಡಲಾಗಿದೆ.

ತಿರುಗಣೆ ಯಂತ್ರದ (ಲೇತ್) ಯಂತ್ರ-ತಾಸು ದರ ರೂ. 120 ಎಂದು ಭಾವಿಸೋಣ. ಮೇಲೆ ಹೇಳಿದ ಐದು ಎರಕಗಳನ್ನು ಈ ಯಂತ್ರದ ಮೂಲಕ ಕ್ರಮವಾಗಿ 1 ತಾಸು, $1\frac{1}{2}$ ತಾಸು, $\frac{1}{2}$ ತಾಸು, 2 ತಾಸು ಹಾಗೂ $\frac{1}{4}$ ತಾಸು ಪರಿಷ್ಕರಿಸಬೇಕಾದಲ್ಲಿ ಆ ಪರಿಷ್ಕರಣೆಗೆ ತಗಲುವ ವೆಚ್ಚ ಅನುಕ್ರಮವಾಗಿ ರೂ. 120, ರೂ. 180, ರೂ. 60, ರೂ. 240, ಹಾಗೂ ರೂ. 30.

ಇದೇ ರೀತಿ ಇತರ ಯಂತ್ರಗಳ ತಾಸು ದರಗಳ ಸಹಾಯದಿಂದ ಆಯಾ ಘಟ್ಟದಲ್ಲಿ ಪರಿಷ್ಕರಣಕ್ಕೆ ತಗಲುವ ವೆಚ್ಚವನ್ನು ಲೆಕ್ಕಾಚಾರ ಮಾಡಬಹುದು. ಕಚ್ಚಾ ಸಾಮಗ್ರಿಯ ಖರ್ಚು, ಯಂತ್ರ ರೂಪಣೆಗೆ ತಗಲುವ ಖರ್ಚು ಹಾಗೂ ಇನ್ನಿತರ ನೇರ ಖರ್ಚುಗಳನ್ನು ಕೂಡಿದರೆ ವಸ್ತುವೊಂದಕ್ಕೆ ತಗಲುವ ನೇರ ವೆಚ್ಚ ದೊರಕುತ್ತದೆ. ಆಡಳಿತಾತ್ಮಕ ವೆಚ್ಚಗಳನ್ನು ಹಂಚುವ ವಿಧಾನದ ಚರ್ಚೆಯನ್ನು ಮುಂದಿನ ಸಂಚಿಕೆಗಳಲ್ಲಿ ಎದುರುನೋಡಬಹುದು.

### ಬೆಲೆ ನಿಗದಿ

ಈ ರೀತಿ, ಉತ್ಪನ್ನಗಳ ಇಡಿಯಾದ ಖರ್ಚು ಹಾಗೂ ಬಿಡಿ ಬಿಡಿ ಖರ್ಚುಗಳನ್ನು ಕಂಡುಹಿಡಿದ ಅನಂತರ ವೆಚ್ಚ ನಿರ್ಣಯ ಆದಂತೆಯೇ. ಮಾರುಕಟ್ಟೆಯ ಸ್ಥಿತಿಗತಿಗಳಿಗೆ ಹೊಂದಿಕೊಂಡಂತೆ ಲಾಭಾಂಶವನ್ನು ಸೇರಿಸಿ ಬೆಲೆಗಟ್ಟಬೇಕಾಗುತ್ತದೆ. ಬೆಲೆಗಟ್ಟುವುದಕ್ಕಾಗಿ ಯಾವ ವೈಜ್ಞಾನಿಕ ಸೂತ್ರವೂ ಇಲ್ಲವೆಂದು ಹೇಳಲಾಗದಿದ್ದರೂ, ಉದ್ಯಮಿಯ ಮಾರುಕಟ್ಟೆಯ ನಾಡಿಯ ಜ್ಞಾನವೇ ಬೆಲೆ ನಿಗದಿಗೆ ಹೆಚ್ಚು ಸಹಾಯ ಮಾಡುತ್ತದೆ.

ಬ್ಯಾಂಕಿಂಗ್ ಪ್ರಪಂಚಕ್ಕೂ ವೆಚ್ಚ ನಿರ್ಣಯಕ್ಕೂ ಸಂಬಂಧವೇನೆಂದು ಹಲವರು ಮೂಗೆಳೆಯಬಹುದು. ಇಂದು ಬ್ಯಾಂಕಿಂಗ್ ಸಂಸ್ಥೆಗಳು ಸಾಲ ನೀಡುವುದರ ಜೊತೆಗೆ ಹಲವಾರು ಇನ್ನಿತರ ಪಾತ್ರಗಳನ್ನೂ ವಹಿಸಬೇಕಾಗುತ್ತದೆ. ಉದ್ಯಮಿಯೊಬ್ಬ ತನ್ನ ಉತ್ಪನ್ನಗಳಿಗೆ ವೈಜ್ಞಾನಿಕವಾಗಿ ಬೆಲೆ ಕಟ್ಟದಿದ್ದಲ್ಲಿ ಹಾನಿಸಂಭವವೇರ್ಪಡುತ್ತದೆ. ಈ ಹಾನಿಯಿಂದ ಹಣ ತೊಡಗಿಸಿರುವ ಬ್ಯಾಂಕಿಗೂ ಹಾನಿಯಾಗುತ್ತದೆ. ಬ್ಯಾಂಕರ್ ವೆಚ್ಚನಿರ್ಣಯ ಹಾಗೂ ಬೆಲೆಗಟ್ಟುವಿಕೆಯ ಸೂತ್ರಗಳನ್ನು ಅರಿತಿದ್ದರೆ, ಸಣ್ಣ ಗಾತ್ರದ ಕೈಗಾರಿಕೆಗಳ ಸಹಾಯಕ್ಕೆ ಹೋಗಲು ಸಾಧ್ಯವಿದೆ. ಹಲವು ಬ್ಯಾಂಕುಗಳಲ್ಲಿ ಈಗಾಗಲೆ ಈ ರೀತಿಯ ತಾಂತ್ರಿಕ ಸಲಹೆ ನೀಡಲು ಅಧಿಕಾರಿ ತಂತ್ರಜ್ಞರ ವಿಶೇಷ ತಂಡಗಳಿವೆ.

ಬೆಲೆಗಟ್ಟುವಿಕೆಗೆ ಸಂಬಂಧಿಸಿದಂತೆ ಸೀಮಾಂತ ವೆಚ್ಚ ನಿರ್ಣಯ (ಮಾರ್ಜಿನಲ್ ಕ್ಯಾಸ್ಟಿಂಗ್) ಸೂತ್ರವನ್ನೂ ಅರಿತಿದ್ದರೆ ಮತ್ತೂ ಅನುಕೂಲ. ಅದರ ಬಗ್ಗೆ ಚರ್ಚೆಯನ್ನು ಬರುವ ಸಂಚಿಕೆಗಳಲ್ಲಿ ಎದುರುನೋಡಬಹುದು.

## ನಮ್ಮ ಗ್ರಾಹಕರು

ಬೆಂಗಳೂರಿನಲ್ಲಿರುವ ತನ್ನ ಮಗನಿಗೆ ಹಣ ಕಳುಹಿಸಲು ಬ್ಯಾಂಕಿಗೆ ಬಂದ ಲಿಂಗಜ್ಜ 400/- ರೂ.ಗಳಿಗೆ ಒಂದು ಡ್ರಾಫ್ಟ್ ಪಡೆದುಕೊಂಡ. ನಮ್ಮ ಅಧಿಕಾರಿಗಳು ಅವನಿಗೆ ಡ್ರಾಫ್ಟ್ ಕೊಟ್ಟು, ಅದನ್ನು ಕವರಿನಲ್ಲಿ ಹಾಕಿ ಮಗನಿಗೆ ಸೇರಲು ಡಬ್ಬದಲ್ಲಿ ಹಾಕು ಅಂತ ಸಲಹೆ ಕೊಟ್ಟರು. ಲಿಂಗಜ್ಜ ಹೊರಟು ಹೋದ.

3-4 ತಿಂಗಳಾಗಿರಬಹುದು ಲಿಂಗಜ್ಜ ಧಡಧಡನೆ ಬ್ಯಾಂಕಿಗೆ ಬಂದು ಮ್ಯಾನೇಜರರ ಕೋಣೆಗೆ ನುಗ್ಗಿದ. ಮ್ಯಾನೇಜರರ ಮೇಲೆ ಕೂಗಾಡತೊಡಗಿದ. "ಎಂಥಾ ಬ್ಯಾಂಕ್ರೀ ಇದು! ಮೂರು ತಿಂಗಳಾಯ್ತಲ್ರೀ ನೀವು ಕೊಟ್ಟ ಚೀಟೀನ ಡಬ್ಬೀಲೀ ಹಾಕಿ! ನನ್ಮಗ ಕಾಸೇ ಬಂದಿಲ್ಲ ಅಂತ ಬರ್ದವ್ನೆ. ಇಂಗೇನಾ ನೀವು ತಿಳೀದವರ್ಗೆ ಮೋಸ ಮಾಡಾದು ?" ಎಂದೆಲ್ಲ ಕೂಗಾಡಿದ.

ಮ್ಯಾನೇಜರ್ ಹಾಗೂ ಇತರ ಅಧಿಕಾರಿಗಳು ಸಾಕಷ್ಟು ಶ್ರಮವಹಿಸಿ ಅವನನ್ನು ಹತೋಟಿಗೆ ತಂದು ವಿವರವಾಗಿ ಕೇಳಿದಾಗ ಲಿಂಗಜ್ಜ ಬಾಯಿ ಬಿಟ್ಟ: "ನೀವು ಆವತ್ತು 400 ರೂಪಾಯಿಗೆ ಕೊಟ್ಟ ಚೀಟೀನ ಕವರ್ನಾಗಿ ಹಾಕಿ ನನ್ನ ಮಗನ ಇಳಾಸ ಬರ್ದಿ ಆ ಡಬ್ಬೀಲಿ ಆಕಿ ಮೂರು ತಿಂಗಳಾಯ್ತಲ್ಲಾ ಸ್ವಾಮಿ," ಎಂದ. ನಮ್ಮ ಬ್ಯಾಂಕಿನ ಮೂಲೆಯೊಂದರಲ್ಲಿ ನೇತು ಹಾಕಿದ್ದ ಸಲಹಾ ಪೆಟ್ಟಿಗೆಯನ್ನು ಅವನು ತೋರಿಸಿದ. ಪೆಟ್ಟಿಗೆ ತೆಗೆಸಿ ನೋಡಿದಾಗ ಲಿಂಗಜ್ಜನ ಮಗನಿಗೆ ಸೇರಬೇಕಾಗಿದ್ದ ಕವರು ಅಲ್ಲೇ ಇತ್ತು. (ಮೂರು ತಿಂಗಳಾದರೂ ಸಲಹಾ ಪೆಟ್ಟಿಗೆಯನ್ನು ಒಮ್ಮೆಯೂ ತೆರೆದು ನೋಡಿರಲಿಲ್ಲವೆ?—ಸಂ.)

ಪು. ರಾ. ಮುರಲೀಧರ, ಕೆನರಾ ಬ್ಯಾಂಕ್, ಹುಳಿಯಾರು

# ಭಾರತದ ಅನಿವಾಸಿ ಭಾರತೀಯರಿಗೆ ಬ್ಯಾಂಕಿಂಗ್ ಸೌಲಭ್ಯಗಳು

ಎಸ್. ಶ್ರೀಧರ್

ವಿದೇಶಗಳಲ್ಲಿರುವ ಸರ್ಕಾರಿ ನೌಕರರು, ವಿವಿಧ ಅಂತರ ರಾಷ್ಟ್ರೀಯ ಸಂಸ್ಥೆಗಳಲ್ಲಿರುವವರು, ಪರದೇಶಗಳಲ್ಲಿ ಅನಿರ್ದಿಷ್ಟ ಕಾಲದವರೆಗೆ ಇರುವವರು—ಇಂಥವರನ್ನು ಅನಿವಾಸಿಗಳು (ನಾನ್-ರೆಸಿಡೆಂಟ್ಸ್) ಎಂದು ಕರೆಯಲಾಗುವುದು. ಇವರಿಗಾಗಿ ಬ್ಯಾಂಕುಗಳು ವಿವಿಧ ಬ್ಯಾಂಕಿಂಗ್ ಸೌಲಭ್ಯಗಳನ್ನು ನೀಡುತ್ತವೆ. ಅನೇಕ ಯೋಜನೆಗಳನ್ನು ಇವರಿಗಾಗಿ ವಿಶೇಷವಾಗಿ ರೂಪಿಸಲಾಗಿದೆ.

ಅನಿವಾಸಿಗಳು ಭಾರತೀಯ ಬ್ಯಾಂಕುಗಳಲ್ಲಿ ಖಾತೆಗಳನ್ನು ತೆರೆಯಬಹುದು. ಆದರೆ ಅಂಥ ಖಾತೆಗೆ ಮೊದಲ ಜಮೆ ವಿದೇಶೀ ಬ್ಯಾಂಕುಗಳ ಮೂಲಕ ಬರಬೇಕು. ಅನಿವಾಸಿ ಖಾತೆಗಳೆಂದು ಇವನ್ನು ಕರೆಯುತ್ತಾರೆ. ಇವುಗಳಲ್ಲಿ ಮೂರು ವಿಧ: 1 ಸಾಮಾನ್ಯ ಅನಿವಾಸಿ ಖಾತೆ (ಆರ್ಡಿನೆರಿ ನಾನ್-ರೆಸಿಡೆಂಟ್ ಅಕೌಂಟ್), 2 ಅನಿವಾಸಿ [ಅನ್ಯರಾಷ್ಟ್ರ] ರೂಪಾಯಿ ಖಾತೆ (ನಾನ್-ರೆಸಿಡೆಂಟ್ [ಎಕ್ಸ್‌ಟರ್ನಲ್] ರುಪೀ ಅಕೌಂಟ್), 3 ಅನಿವಾಸಿ ವಿದೇಶಿ ಕರೆನ್ಸಿ ಖಾತೆ (ನಾನ್-ರೆಸಿಡೆಂಟ್ ಫಾರಿನ್ ಕರೆನ್ಸಿ ಖಾತೆ).

**ಅನಿವಾಸಿ ರೂಪಾಯಿ ಖಾತೆ**

ಸೋವಿಯತ್ ದೇಶ, ಪೋಲೆಂಡ್, ಪೂರ್ವ ಜರ್ಮನಿ, ಜೆಕೊಸ್ಲೊವಾಕಿಯ, ರುಮೇನಿಯ ಮೊದಲಾದ ದ್ವಿಪಕ್ಷೀಯ ದೇಶಗಳನ್ನು ಬಿಟ್ಟು ಇತರ ದೇಶಗಳಲ್ಲಿರುವ ಭಾರತೀಯರು ಆಯಾ ದೇಶಗಳಲ್ಲಿಯ ಬ್ಯಾಂಕುಗಳ ಮೂಲಕ ಹಣವನ್ನು ರವಾನಿಸಬಹುದು. ಖಾತೆದಾರರು ಭಾರತದ ನಿವಾಸಿಯಾದ್ದನ್ನು ಬ್ಯಾಂಕರನಿಗೆ ತಿಳಿಸುವುದಾಗಿ ವಚನ ನೀಡಬೇಕು.

ಈ ಖಾತೆಯಲ್ಲಿಯ ಸಿಲ್ಕಿನ ಮೇಲೆ ಬರುವ ವರಮಾನ ಭಾರತೀಯ ವರಮಾನ ತೆರಿಗೆಯಿಂದ ಮುಕ್ತವಾಗಿರುತ್ತದೆ. ಸಂಪತ್ತಿನ ತೆರಿಗೆಯಿಂದಲೂ ಈ ಖಾತೆಯ ಸಿಲ್ಕು ವಿನಾಯಿತಿ ಪಡೆದಿರುತ್ತದೆ; ಮತ್ತು ಖಾತೆದಾರ ಭಾರತ ನಿವಾಸಿಯಾದ ಅನಂತರ ಏಳು ವರ್ಷಗಳ ವರೆಗೂ ಈ ರಿಯಾಯಿತಿ ಮುಂದುವರಿಯುತ್ತದೆ. ಸ್ಥಳೀಯ ಖರ್ಚುಗಳನ್ನು (ಕುಟುಂಬದವರಿಗೆ ಪಾವತಿ, ಕಂದಾಯ ಮತ್ತು ವಿಮಾ ಕಂತು ಪಾವತಿ, ಇತ್ಯಾದಿ) ಈ ಖಾತೆಯಿಂದ ಕೊಡಬಹುದು. ಈ ಖಾತೆಗಳಲ್ಲಿಯ ಸಿಲ್ಕು ಮತ್ತು ಅದರ ಮೇಲೆ ಬಂದ ಬಡ್ಡಿಯನ್ನು ಖಾತೆದಾರ ತಾನು ಸದ್ಯ ನಿವಾಸಿಯಾಗಿರುವ ದೇಶಕ್ಕೆ, ರಿಸರ್ವ್ ಬ್ಯಾಂಕಿನ ಅನುಮತಿಯಿಲ್ಲದೆ, ಮರುರವಾನೆ ಪಡೆಯಬಹುದು. ಆದರೆ ದ್ವಿಪಕ್ಷೀಯ ದೇಶಗಳಿಗೆ ರವಾನಿಸಬೇಕಾದರೆ ಪೂರ್ವ ಅನುಮತಿ ಬೇಕು.

**ಅನಿವಾಸಿ ಕರೆನ್ಸಿ ಖಾತೆ**

ಇತರ ದೇಶಗಳ ಕರೆನ್ಸಿಗಳ ಜೊತೆ ರೂಪಾಯಿಯ ವಿನಿಮಯ ದರದಲ್ಲಿ ಉಂಟಾಗುವ ಏರುಪೇರುಗಳಿಂದ ಆಗುವ ನಷ್ಟವನ್ನು ಈ ಖಾತೆದಾರರು ಅನುಭವಿಸಬೇಕಾಗಿಲ್ಲ. ಖಾತೆಗಳನ್ನು ನಿಗದಿ ಪಡಿಸಿದ ಕರೆನ್ಸಿಗಳಲ್ಲಿ ಮಾತ್ರ ತೆರೆಯಬಹುದು. ಸದ್ಯದಲ್ಲಿ, ಅಮೆರಿಕದ ಡಾಲರ್ ಮತ್ತು ಪೌಂಡ್ ಸ್ಟರ್ಲಿಂಗ್‌ಗಳಲ್ಲಿ ಖಾತೆಗಳನ್ನು ತೆರೆಯಬಹುದು. ಇತರ ಕರೆನ್ಸಿಗಳಲ್ಲಿ ಬಂದ ರವಾನೆಗಳನ್ನು ಈ ನಿಗದಿ ಪಡಿಸಿದ ಕರೆನ್ಸಿಗಳಿಗೆ ಪರಿವರ್ತಿಸಲಾಗುವುದು. ಖಾತೆದಾರನ ಆದೇಶದಂತೆ ಇದೇ ಕರೆನ್ಸಿಯಲ್ಲಿ ಎಲ್ಲಿಗೆ ಬೇಕಾದರೂ ಹಣ ಕಳುಹಿಸಲಾಗುವುದು. ಖಾತೆ ಯಾವ ಕರೆನ್ಸಿಯಲ್ಲಿ ಇರುವುದೋ ಆ ಕರೆನ್ಸಿಯಲ್ಲಿ ಬಡ್ಡಿಯನ್ನು ಕೊಡಲಾಗುವುದು. ಹಣವನ್ನು ಕೇವಲ ಸಾವಧಿ ಠೇವಣಿಗಳಲ್ಲಿ, 15 ದಿನಗಳಿಂದ 10 ವರ್ಷಗಳ ವರೆಗೆ ತೊಡಗಿಸಬಹುದು. 12 ತಿಂಗಳಿಗಿಂತ ಹೆಚ್ಚಿನ ಅವಧಿಯ ಠೇವಣಿಗಳ ಮೇಲೆ ಚಕ್ರಬಡ್ಡಿಯನ್ನು ಕೊಡಲಾಗುವುದು. ಬಡ್ಡಿಯನ್ನು ಆರು ತಿಂಗಳಿಗೊಮ್ಮೆ ಪಡೆಯಬಹುದು. ಈ ಸೌಲಭ್ಯ ಸಿಗಬೇಕಾದರೆ ಠೇವಣಿಯನ್ನು ಪುನರ್‌ವಿನಿಯೋಜನೆ ಠೇವಣಿ ಯೋಜನೆಯಲ್ಲಿ (ರೀ-ಇನ್‌ವೆಸ್ಟ್‌ಮೆಂಟ್ ಪ್ಲ್ಯಾನ್) ತೊಡ

ಗಿಸಬೇಕು. ಇತರ ಅನಿವಾಸಿ ಖಾತೆಗಳಿಗೆ ಸಲ್ಲುವ ಪ್ರಯೋಜನಗಳು ಇಲ್ಲಿಯೂ ದೊರೆಯುತ್ತವೆ. ಭಾರತ ನಿವಾಸಿಗಳಿಗೆ ಅನ್ವಯಿಸುವ ನಿಯಮಗಳೇ ಈ ಸಾವಧಿ ಠೇವಣಿಗಳಿಗೂ, ಯಥೋಚಿತ ಪರಿವರ್ತನೆಗಳೊಡನೆ, ಅನ್ವಯಿಸುತ್ತವೆ.

### ಸಾಮಾನ್ಯ ಅನಿವಾಸಿ ಖಾತೆ

ಈ ಖಾತೆಯ ಮೇಲಣ ಬಡ್ಡಿ ವರಮಾನ ತೆರಿಗೆಯಿಂದ ವಿನಾಯಿತಿ ಪಡೆಯುವುದಿಲ್ಲ. ಈ ಖಾತೆಯನ್ನು ಋಣಿಸುವುದರ ಮೂಲಕ (ಡೆಬಿಟ್) ಪರದೇಶಗಳಿಗೆ ಹಣ ರವಾನೆ ಮಾಡಬೇಕಾದರೆ ಬ್ಯಾಂಕಿನ ಪೂರ್ವ ಅನುಮತಿ ಬೇಕು.

### ವಿದೇಶಿ ಒಳರವಾನೆ ಪಾವತಿ ಕ್ರಮ

ಭಾರತೀಯ ನಿವಾಸಿಗಳ ಹೆಸರಿಗೆ ಬಂದ ಅಥವಾ ಅವರ ಖಾತೆಗಳ ಜಮೆಗಾಗಿ ಬಂದ ವಿದೇಶಿ ತಂತಿರವಾನೆ, ಅಂಚೆಪತ್ರ ಮತ್ತು ಪಾವತಿ ಆದೇಶಗಳನ್ನು (ಪೇ ಆರ್ಡರ್) ತತ್‌ಕ್ಷಣ ಭಾರತೀಯ ರೂಪಾಯಿಗೆ ಪರಿವರ್ತಿಸುವ ಹಕ್ಕನ್ನು ಅಧಿಕೃತ ವಿದೇಶಿ ವಿನಿಮಯ ವಹಿವಾಟುದಾರರು ಹೊಂದಿರುತ್ತಾರೆ. ಇವರು ವಿದೇಶಿ ರವಾನೆಗೆ ಬದಲಾಗಿ ಎಫ್.ಐ.ಆರ್.ಪಿ.ಎಸ್. ಎಂಬ ಸೌಲಭ್ಯವನ್ನು (ಫಾರಿನ್ ಇನ್‌ಲೆಂಡ್ ರೆಮಿಟೆನ್ಸಸ್ ಪೇಮೆಂಟ್ ಸಿಸ್ಟಮ್) ನೀಡುತ್ತಾರೆ. ರೂ. 10,000ದ ವರೆಗೆ ಈ ಸೌಲಭ್ಯ ನೀಡಲಾಗುತ್ತದೆ. ಇದನ್ನು 3 ತಿಂಗಳುಗಳೊಳಗಾಗಿ ನಗದೀಕರಿಸಿಕೊಳ್ಳಬೇಕು (ಎನ್‌ಕ್ಯಾಷ್). ಇವನ್ನು ಅಧಿಕೃತ ವಹಿವಾಟುದಾರರಲ್ಲಿ ಮತ್ತು ಅನುಸೂಚಿತ ವಾಣಿಜ್ಯ ಬ್ಯಾಂಕುಗಳಲ್ಲಿ ಮುರಿಸಿಕೊಳ್ಳಬಹುದು (ನಗದೀಕರಿಸಿಕೊಳ್ಳಬಹುದು). ಸಂಘ ಸಂಸ್ಥೆಗಳ ಹೆಸರುಗಳಿಗೆ ಈ ಸೌಲಭ್ಯ ನೀಡಲಾಗುವುದಿಲ್ಲ; ಬ್ಯಾಂಕುಗಳ ಹೆಸರಿಗೆ ಕೊಡಲಾಗುವುದು. ಯಾವುದೇ ರೀತಿಯ ಶುಲ್ಕ ಪಡೆಯದೆ, ಫಲಾನುಭವಿಗೆ (ಬೆನಿಫಿಷಿಯರಿ) ವಿದೇಶಿ ಒಳರವಾನೆಯನ್ನು ತಲುಪಿಸಲಾಗುವುದು.

### ತಾತ್ಕಾಲಿಕ ನಿವಾಸಿಗಳಿಗೆ

ತಾತ್ಕಾಲಿಕವಾಗಿ ಭಾರತಕ್ಕೆ ಭೇಟಿ ನೀಡುವ ಭಾರತೀಯರು ತಮ್ಮ ಖಾತೆಯಲ್ಲಿರುವ ವಿದೇಶಿ ಕರೆನ್ಸಿ ಸಿಲ್ಕುಗಳನ್ನು ಗರಿಷ್ಠ ಐದು ವರ್ಷಗಳ ವರೆಗೆ ಉಳಿಸಿಕೊಳ್ಳುವುದಕ್ಕೆ ರಿಸರ್ವ್ ಬ್ಯಾಂಕು ಅನುಮತಿ ನೀಡುತ್ತದೆ. ಆದರೆ ಈ ಅವಧಿಯನ್ನು ಆಯಾ ಸಂದರ್ಭವನ್ನು ಪರಿಶೀಲಿಸಿ ನಿಷ್ಕರ್ಷಿಸಲಾಗುವುದು. ತಾತ್ಕಾಲಿಕವಾಗಿ ನಿವಾಸಕ್ಕೆ ಬಂದವರು ತಮ್ಮಲ್ಲಿರುವ ವಿದೇಶಿ ಕರೆನ್ಸಿಯನ್ನು ತತ್‌ಕ್ಷಣ ಒಪ್ಪಿಸಬೇಕು. ಆದರೆ ಅವರು ಐದು ವರ್ಷಗಳ ಅನಂತರ ಮತ್ತೆ ಅಥವಾ ರಿಸರ್ವ್ ಬ್ಯಾಂಕ್ ನಿರ್ಧರಿಸಿದ ಅವಧಿಯೊಳಗೆ ವಿದೇಶಕ್ಕೆ ಹಿಂದಿರುಗುವುದಾದರೆ ಅಂಥವರಿಗೆ ಅವರು ಒಪ್ಪಿಸಿದ ಕರೆನ್ಸಿಯಲ್ಲೇ ಮರುರವಾನೆ ಒದಗಿಸಲಾಗುವುದು.

ದೀರ್ಘ ಕಾಲ ವಿದೇಶದಲ್ಲಿದ್ದು ತಾಯ್ನಾಡಿಗೆ ಬಂದ ವಯಸ್ಕರು ಇಚ್ಛಿಸಿದಲ್ಲಿ, ಅವರ ವಿದೇಶಿ ಕರೆನ್ಸಿ ಸಿಲ್ಕುಗಳಿಂದ ಒಂದು ಭಾಗವನ್ನು ಅವರ ಖರ್ಚಿಗಾಗಿ ಉಪಯೋಗಿಸಿಕೊಳ್ಳಲು ರಿಸರ್ವ್ ಬ್ಯಾಂಕ್ ಅನುಮತಿ ನೀಡುತ್ತದೆ. ಇಲ್ಲಿಯೂ ಗರಿಷ್ಠ ಕಾಲಾವಧಿ 5 ವರ್ಷ.

### ವಾಪಸಾಗುವ ಭಾರತೀಯರಿಗೆ

ವಿದೇಶೀ ಸರ್ಕಾರಗಳು, ಸ್ವದೇಶಿ ರಾಯಭಾರಿ ಕಛೇರಿಗಳು ಅಂತರರಾಷ್ಟ್ರೀಯ ಸಂಸ್ಥೆ ಇತ್ಯಾದಿಗಳಲ್ಲಿ ಉದ್ಯೋಗಿಗಳಾಗಿದ್ದು ಖಾಯಂ ಆಗಿ ಭಾರತಕ್ಕೆ ವಾಪಸ್ಸು ಬರುವವರಿಗೆ ಒಂದು ಯೋಜನೆ ಇದೆ. ವಾಪಸಾಗುವ ಭಾರತೀಯರ ವಿದೇಶಿ ವಿನಿಮಯ ಹಕ್ಕುದಾರಿಕೆ ಯೋಜನೆ (ರಿಟರ್ನಿಂಗ್ ಇಂಡಿಯನ್ಸ್ ಫಾರಿನ್ ಎಕ್ಸ್‌ಚೇಂಜ್ ಎನ್‌ಟೈಟಲ್‌ಮೆಂಟ್ ಸ್ಕೀಮ್) ಎಂದು ಇದರ ಹೆಸರು. ಅವರು ಭಾರತಕ್ಕೆ ರವಾನಿಸಿದ ಹಣದ ಸೇ. 25ರಷ್ಟನ್ನು ನಿರ್ದಿಷ್ಟ ಖಾಸಗಿ ಉದ್ದೇಶಗಳಿಗೆ ಬಳಸಿಕೊಳ್ಳಬಹುದು.

### ಇತರ

ಅನಿವಾಸಿಗಳ ಅಥವಾ ಭಾರತ ಸಂಜಾತರ ಸಂಬಂಧಿಗಳಿಗೆ ವಿದೇಶಿ ಒಳರವಾನೆ ಬಂದರೆ, ಅದಕ್ಕೆ ಅವರು ಸ್ಕೂಟರ್, ಟ್ರ್ಯಾಕ್ಟರ್ ಮತ್ತು ಸಿಮೆಂಟನ್ನು ಆದ್ಯತಾನುಸಾರ ಪಡೆಯಬಹುದು. ಸ್ಕೂಟರ್‌ಗಾಗಿ ಬಜಾಜ್ ಆಟೊ ಲಿಮಿಟೆಡ್, ಪೂಣೆ, ಇವರಿಗೆ ಅರ್ಜಿ ಸಲ್ಲಿಸಬೇಕು. ಅಂತೆಯೇ ಟ್ರಾಕ್ಟರ್‌ಗಾಗಿ ಕೈಗಾರಿಕಾ ಮತ್ತು ನಾಗರಿಕ ಪೂರೈಕೆ ಮಂತ್ರಾಲಯಕ್ಕೆ (ಭಾರಿ ಕೈಗಾರಿಕೆಗಳ ಇಲಾಖೆ) ಅರ್ಜಿ ಸಲ್ಲಿಸಬೇಕು. ಸಿಮೆಂಟಿಗಾಗಿ ಸಿಮೆಂಟ್ ನಿಯಂತ್ರಕರು ಕೈಗಾರಿಕೆ ಮತ್ತು ನಾಗರಿಕ ಸರಬರಾಜು ಮಂತ್ರಾಲಯಕ್ಕೆ (ಸೇಥಿ ಭವನ, 7 ರಾಜೇಂದ್ರ ಪ್ಲೇಸ್, ನವ ದೆಹಲಿ) ಅರ್ಜಿ ಹಾಕಬೇಕು. ಇವನ್ನು ಪಡೆಯಬೇಕಾದರೆ ಕನಿಷ್ಠ ಮಿತಿಗಳು ಈ ರೀತಿಯಿವೆ:

| | |
|---|---|
| ಸ್ಕೂಟರ್ | ರೂ. 6,000 |
| ಟ್ರ್ಯಾಕ್ಟರ್ | |
| 1 40 ಅಶ್ವಶಕ್ತಿ ವರೆಗೆ | ರೂ. 55,000 |
| 2 40ಕ್ಕಿಂತ ಹೆಚ್ಚಿನ ಅಶ್ವಶಕ್ತಿಗೆ | ರೂ. 70,000 |
| ಸಿಮೆಂಟ್—ಒಂದು ಟನ್ನಿಗೆ | ರೂ. 600 |

ಈ ರೀತಿಯ ಯೋಜನೆಗಳಲ್ಲಿ ತಮ್ಮ ಉಳಿತಾಯವನ್ನು ತೊಡಗಿಸುವುದರಿಂದ ದೇಶದ ಆರ್ಥಿಕ ಸ್ಥಿತಿ ಉತ್ತಮಗೊಳ್ಳುವುದಕ್ಕೆ ಅನಿವಾಸಿ ಭಾರತೀಯರು ಅನುವು ಮಾಡಿಕೊಡುತ್ತಿದ್ದಾರೆ. ಇದರಿಂದ ದೇಶದ ಪಾವತಿ ಸಿಲ್ಕು ಸ್ಥಿತಿ ಉತ್ತಮಗೊಳ್ಳುತ್ತದೆ. ಈ ಯೋಜನೆಗಳ ವ್ಯಾಪ್ತಿಯನ್ನು ಹೆಚ್ಚಿಸಲು ಸಾಧ್ಯವಿದೆ. ಇದಕ್ಕಾಗಿ ಈಗ ಸರ್ಕಾರ ಒಂದು ಸಮಿತಿಯನ್ನು ನೇಮಿಸಿದೆ. ಪರದೇಶದಲ್ಲಿರುವ ಭಾರತೀಯರು ಈ ಪ್ರಯೋಜನಗಳನ್ನು ಹೆಚ್ಚುಹೆಚ್ಚಾಗಿ ಪಡೆದು ದೇಶದ ಸ್ಥಿತಿಯನ್ನು ಸುಧಾರಿಸಬೇಕಾಗಿದೆ.

# ಬ್ಯಾಂಕ್ ಆಫ್ ಸಿಲೋನ್

## ಅಧಿಕಾರಿಯೊಬ್ಬರ ಸಂದರ್ಶನ

---

ಸಂದರ್ಶಕ: **ಫಕೀರ್ ಮುಹಮ್ಮದ್ ಕಟ್ಪಾಡಿ**

ಬ್ಯಾಂಕ್ ಆಫ್ ಸಿಲೋನ್ ಶ್ರೀಲಂಕಾದ ಹೆಸರಾಂತ ಬ್ಯಾಂಕು. ಇದಕ್ಕೆ ೧೯೩೯ರಷ್ಟು ಹಿಂದಿನ ಇತಿಹಾಸವಿದೆ. ಭಾರತೀಯ ಬ್ಯಾಂಕುಗಳಿಗೂ ಈ ಬ್ಯಾಂಕಿಗೂ ವಿಶಿಷ್ಟವಾದ ವ್ಯತ್ಯಾಸಗಳನ್ನು ನಾವು ಕಾಣದಿದ್ದರೂ ಈ ಪುಟ್ಟ ದೇಶದಲ್ಲಿ ಅದರ ಗಣನೀಯ ಪ್ರಗತಿ ಸಾಧಿಸಿದ ಜನಪ್ರಿಯತೆ ಗಮನಾರ್ಹ. ಪ್ರಸ್ತುತ ಸಂದರ್ಶಕನಿಗೆ ಈ ಬ್ಯಾಂಕಿನ ಪ್ರಮುಖ ಅಧಿಕಾರಿಯೋರ್ವರನ್ನು ಬೆಂಗಳೂರಿನ ಭಾರತೀಯ ಸ್ಟೇಟ್ ಬ್ಯಾಂಕ್ ನೌಕರರ ತರಬೇತಿ ಶಾಲೆಯಲ್ಲಿ ಭೇಟಿ ಮಾಡುವ ಅವಕಾಶ ದೊರೆಯಿತು. ಈ ಸಂದರ್ಶನದಲ್ಲಿ ಬ್ಯಾಂಕ್ ಆಫ್ ಸಿಲೋನಿನ ಸ್ಥೂಲ ಪರಿಚಯವಿದೆ. ಬ್ಯಾಂಕಿಂಗ್ ಪ್ರಪಂಚದ ಓದುಗರಿಗೆ ನಮ್ಮ ನೆರೆಯ ಪುಟ್ಟ ದೇಶದ ದೊಡ್ಡ ಬ್ಯಾಂಕನ್ನು ಪರಿಚಯಿಸಿ ಕೊಡುವುದಷ್ಟೇ ಈ ಸಂದರ್ಶನದ ಮುಖ್ಯ ಉದ್ದೇಶ. ಸಂದರ್ಶಿತ ಶ್ರೀ ಪಿ. ಎಂ. ಪೆರೀರಾರವರು ಬ್ಯಾಂಕ್ ಆಫ್ ಸಿಲೋನಿನಲ್ಲಿ ಸದ್ಯಕ್ಕೆ ಅಸಿಸ್ಟೆಂಟ್ ಜನರಲ್ ಮ್ಯಾನೇಜರರಾಗಿ ಕಾರ್ಯನಿರ್ವಹಣೆ ಮಾಡುತ್ತಿದ್ದಾರೆ.

**ಸಂದರ್ಶಕ:** ನಿಮ್ಮ ದೇಶದ ಆರ್ಥಿಕ ಸ್ಥಿತಿಯ ಮೇಲೆ ನಿಮ್ಮ ಬ್ಯಾಂಕಿನ ಪ್ರಭಾವವೇನು?

**ಶ್ರೀ ಪೆರೀರಾ:** ಶ್ರೀಲಂಕಾ ದ್ವೀಪದಲ್ಲಿ ಬ್ಯಾಂಕ್ ಆಫ್ ಸಿಲೋನ್ ಒಂದು ಪ್ರಮುಖ ಬ್ಯಾಂಕು. ಇದು 1939ರಲ್ಲಿ ಸ್ಥಾಪಿತವಾಗಿ, 1961ರಲ್ಲಿ ರಾಷ್ಟ್ರೀಕೃತವಾಯಿತು. ತನ್ನ 550 ಶಾಖೆಗಳೊಂದಿಗೆ ಇದು ಶ್ರೀ ಲಂಕಾ ದ್ವೀಪದ ಎಲ್ಲೆಡೆಗಳಲ್ಲಿಯೂ ವ್ಯಾಪಕವಾಗಿ ಹರಡಿದೆ. ನಮ್ಮ ಬ್ಯಾಂಕು ಸರಕಾರದ ಸ್ವಾಮ್ಯಕ್ಕೊಳಗಾಗಿದ್ದು, ಸರಕಾರಿ ಬ್ಯಾಂಕು ಎಂದು ಕರೆಸಿಕೊಂಡಿದೆ. ಇದು ದೇಶದ ವಿವಿಧ ಆರ್ಥಿಕ ರಂಗಗಳಲ್ಲಿ ಸರ್ವತೋಮುಖ ಅಭಿವೃದ್ಧಿಯನ್ನು ಸಾಧಿಸಲು ಸಕ್ರಿಯವಾಗಿ ಕಾರ್ಯನಿರ್ವಹಣೆ ಮಾಡುತ್ತಿದೆ. ಕೃಷಿ, ತೋಟಗಾರಿಕೆ, ಮೀನುಗಾರಿಕೆ, ಸಣ್ಣ ಉದ್ಯಮಗಳು, ದೊಡ್ಡ ಕೈಗಾರಿಕೆಗಳು ಇತ್ಯಾದಿ ಕಾರ್ಯಕ್ಷೇತ್ರಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಧನಸಹಾಯ ನೀಡುವಲ್ಲಿ ಮಹತ್ವದ ಪಾತ್ರ ವಹಿಸಿದೆ.

**ಸಂದರ್ಶಕ:** ನಿಮ್ಮ ಬ್ಯಾಂಕಿನ ಆಡಳಿತ ರಚನೆಯ ಸಂಕ್ಷಿಪ್ತ ಪರಿಚಯ ನೀಡುತ್ತೀರಾ?

**ಶ್ರೀ ಪೆರೀರಾ:** ನಮ್ಮ ಬ್ಯಾಂಕಿನ ವ್ಯವಸ್ಥಾಪನೆ ಸಾಂಸ್ಥಿಕ ವಿಧಾನದ್ದು (ಕಾರ್ಪೊರೇಟ್ ಮ್ಯಾನೇಜ್‌ಮೆಂಟ್). ಬ್ಯಾಂಕಿನ ನೀತಿ ನಿಯಮ ಕಾರ್ಯ ವಿಧಾನಗಳನ್ನು ಕೇಂದ್ರ ಕಛೇರಿ ರೂಪಿಸುತ್ತದೆ. ಈ ಕಛೇರಿಗೆ ಜನರಲ್ ಮ್ಯಾನೇಜರರು ಮುಖ್ಯಸ್ಥರು. ಆಡಳಿತವನ್ನು ಸರಳಗೊಳಿಸುವ ಉದ್ದೇಶದಿಂದ ಬ್ಯಾಂಕನ್ನು 5 ಪ್ರಾದೇಶಿಕ ಕಛೇರಿಗಳ ಅಡಿಯಲ್ಲಿ ವಿಭಜಿಸಿದೆ. ಪ್ರಾದೇಶಿಕ ಕಛೇರಿಗಳು ಅಸಿಸ್ಟೆಂಟ್ ಜನರಲ್ ಮ್ಯಾನೇಜರರ ಅಧೀನದಲ್ಲಿವೆ. ಅಸಿಸ್ಟೆಂಟ್ ಜನರಲ್ ಮ್ಯಾನೇಜರರ ಅಧೀನದಲ್ಲಿ ಜಿಲ್ಲಾವಾರು ವಿಂಗಡಣೆಯಾಗಿ ಡಿಸ್ಟ್ರಿಕ್ಟ್ ಮ್ಯಾನೇಜರರು ಪ್ರತಿ ಜಿಲ್ಲೆಯಲ್ಲಿನ ಶಾಖೆಗಳ ಮೇಲ್ವಿಚಾರಣೆ ನೋಡಿಕೊಳ್ಳುತ್ತಾರೆ.

**ಸಂದರ್ಶಕ:** ನಿಮ್ಮ ದೇಶದ ಬ್ಯಾಂಕಿಂಗ್ ಉದ್ಯಮದಲ್ಲಿ

ಪೈಪೋಟಿ ಹೇಗಿದೆ ಮತ್ತು ಈ ಪೈಪೋಟಿಯಲ್ಲಿ ನಿಮ್ಮ ಬ್ಯಾಂಕಿನ ಸ್ಥಾನವನ್ನು ಹೇಳುವಿರಾ?

**ಶ್ರೀ ಪೆರೀರಾ:** ನಮ್ಮಲ್ಲಿ ವಾಣಿಜ್ಯ ಬ್ಯಾಂಕುಗಳೊಳಗೆ ತೀವ್ರವಾಗಿ ಪೈಪೋಟಿಯಿದೆ. ಇದು ನಮ್ಮ ದ್ವೀಪಕ್ಕೆ ಒಂದು ಒಳ್ಳೆಯ ಚಿಹ್ನೆ. ಇತರ ವಾಣಿಜ್ಯ ಬ್ಯಾಂಕುಗಳಲ್ಲಿ ಪೀಪಲ್ಸ್ ಬ್ಯಾಂಕ್, ಗ್ರಿಂಡ್ಲೇಸ್ ಬ್ಯಾಂಕ್, ಕಮರ್ಷಿಯಲ್ ಬ್ಯಾಂಕ್ ಆಫ್ ಸಿಲೋನ್, ಹಾಂಗ್‌ಕಾಂಗ್ ಆಂಡ್ ಷಾಂಘೈ ಬ್ಯಾಂಕ್, ಚಾರ್ಟರ್ಡ್ ಬ್ಯಾಂಕ್, ಭಾರತೀಯ ಸ್ಟೇಟ್ ಬ್ಯಾಂಕ್ ಮುಖ್ಯವಾದವುಗಳು. 1978ರ ಅನಂತರ ಕೊಲಂಬೋದಲ್ಲಿ ತಮ್ಮ ಶಾಖೆಯನ್ನು ಸ್ಥಾಪಿಸಿದ ವಿದೇಶೀ ಬ್ಯಾಂಕುಗಳೆಂದರೆ ಬ್ಯಾಂಕ್ ಆಫ್ ಅಮೆರಿಕ, ಸಿಟಿ ಬ್ಯಾಂಕ್, ಅಮೆರಿಕನ್ ಎಕ್ಸ್‌ಪ್ರೆಸ್, ಇಂಡೋ-ಸುಯೆಜ್ ಬ್ಯಾಂಕ್, ಬ್ಯಾಂಕ್ ಆಫ್ ಕ್ರೆಡಿಟ್ ಅಂಡ್ ಕಾಮರ್ಸ್, ಬ್ಯಾಂಕ್ ಆಫ್ ಓಮನ್, ಯುನೈಟೆಡ್ ಟ್ರಸ್ಟ್ ಬ್ಯಾಂಕ್, ಬ್ಯಾಂಕ್ ಆಫ್ ಹಾಂಗ್‌ಕಾಂಗ್ ಮತ್ತು ಬ್ಯಾಂಕ್ ಆಫ್ ನೆದರ್‌ಲ್ಯಾಂಡ್ ಇತ್ಯಾದಿ.

**ಸಂದರ್ಶಕ:** ನಿಮ್ಮ ಬ್ಯಾಂಕಿನ ಠೇವಣಿಗಳು ಮತ್ತು ಸಾಲಗಳ ಬಗ್ಗೆ ಪರಿಚಯ ನೀಡುತ್ತೀರಾ?

**ಶ್ರೀ ಪೆರೀರಾ:** 1979ರ ಅಂತ್ಯಕ್ಕೆ ನಮ್ಮ ಬ್ಯಾಂಕಿನ ಠೇವಣಿ 593.5 ಕೋಟಿ ಸಿಲೋನ್ ರೂಪಾಯಿಗಳಿಗೂ ಮಿಕ್ಕಿತ್ತು. ಇದು ದ್ವೀಪದ ಎಲ್ಲ ವಾಣಿಜ್ಯ ಬ್ಯಾಂಕುಗಳ ಒಟ್ಟು ಠೇವಣಿಯ ಸೇಕಡ 48ರಷ್ಟಾಗಿದೆ. ನಮ್ಮ ಬ್ಯಾಂಕು ನೀಡಿದ ಸಾಲಗಳ ಮೊತ್ತ 477.4 ಕೋಟಿ ಸಿಲೋನ್ ರೂಪಾಯಿಗಳನ್ನೂ ಮೀರಿದೆ. ಇದು ದ್ವೀಪದ ಎಲ್ಲ ವಾಣಿಜ್ಯ ಬ್ಯಾಂಕುಗಳು ನೀಡಿದ ಒಟ್ಟು ಸಾಲದ ಸೇಕಡ 32ರಷ್ಟಾಗಿದೆ.

**ಸಂದರ್ಶಕ:** ನಿಮ್ಮಲ್ಲಿ ಠೇವಣಿ ಮತ್ತು ಸಾಲಗಳ ಮೇಲಿನ ಬಡ್ಡಿದರಗಳು ಹೇಗಿವೆ?

**ಶ್ರೀ ಪೆರೀರಾ:** ನಮ್ಮ ಬಡ್ಡಿದರಗಳು ಸೆಂಟ್ರಲ್ ಬ್ಯಾಂಕ್ ಬಡ್ಡಿದರವನ್ನೇ ಅವಲಂಬಿಸಿವೆ. ಸದ್ಯಕ್ಕೆ ಸೆಂಟ್ರಲ್ ಬ್ಯಾಂಕು ದರ 12% ಆಗಿದೆ. ವಿವಿಧ ಬಗೆಯ ಸಾಲಗಳಿಗೆ ವಿವಿಧ ಬಡ್ಡಿದರಗಳಿರುತ್ತವೆ. ಸಣ್ಣ ಕೈಗಾರಿಕೆ ಮತ್ತು ರಫ್ತುಗಳಂತಹ ಪ್ರಮುಖ ಕ್ಷೇತ್ರಗಳಿಗೆ ಅನುಪಾತ ದರವನ್ನು ವಿಧಿಸುತ್ತೇವೆ. ಠೇವಣಿಯ ದರಗಳಲ್ಲಿ ಸದ್ಯಕ್ಕೆ ಅತಿ ಹೆಚ್ಚೆಂದರೆ 5 ವರ್ಷಕ್ಕೆ ಮೇಲ್ಪಟ್ಟ ಠೇವಣಿಗಳಿಗೆ 20% ಬಡ್ಡಿ ಕೊಡುತ್ತೇವೆ.

**ಸಂದರ್ಶಕ:** ನಿಮ್ಮಲ್ಲಿ ಪ್ರಮುಖ ಕ್ಷೇತ್ರಗಳ ಸಾಲಗಳ ಸೌಲಭ್ಯವಿದೆಯೆ?

**ಶ್ರೀ ಪೆರೀರಾ:** ಈಗಾಗಲೇ ಹೇಳಿದಂತೆ ನಮ್ಮ ಆರ್ಥಿಕ ರಂಗದಲ್ಲಿ ಮುಖ್ಯವಾದ ಕೆಲವು ಚಟುವಟಿಕೆಗಳಿಗೆ, ಕ್ಷೇತ್ರಗಳಿಗೆ ಸಾಲ ನೀಡುವಲ್ಲಿ ಪ್ರಾಧಾನ್ಯ ನೀಡುವ ಸೌಲಭ್ಯಗಳಿವೆ.

**ಸಂದರ್ಶಕ:** ನಿಮ್ಮಲ್ಲಿರುವ ವಿದೇಶಿ ಬ್ಯಾಂಕುಗಳು ನಿಮ್ಮ ದೇಶೀಯ ಬ್ಯಾಂಕು ಉದ್ಯಮದ ಬೆಳವಣಿಗೆಗೆ ಮಾರಕವಾಗಿವೆಯೆಂದು ನಿಮಗನಿಸುವುದಿಲ್ಲವೆ?

**ಶ್ರೀ ಪೆರೀರಾ:** ನಮ್ಮ ಬ್ಯಾಂಕು ವಿದೇಶಿ ಬ್ಯಾಂಕುಗಳ ತೀವ್ರ ಪೈಪೋಟಿಯನ್ನೆದುರಿಸಬೇಕಾಗಿರುವುದು ಸಹಜವಾದರೂ ಅಂಥ ಪರಿಸ್ಥಿತಿ ನಮ್ಮ ಬೆಳವಣಿಗೆಗೆ ಒಳ್ಳೆಯ ಕೊಡುಗೆಯಾಗಿದೆ. ಇದೊಂದು ಉತ್ತಮ ಚಿಹ್ನೆಯೆಂದು ನಾನು ಹೇಳುವುದು ಇದಕ್ಕಾಗಿಯೇ. ಆದರೆ ಯಾವುದೇ ವಿದೇಶಿ ಬ್ಯಾಂಕು ಬ್ಯಾಂಕ್ ಆಫ್ ಸಿಲೋನನ್ನು ದ್ವೀಪದ 'ಅತ್ಯಂತ ಪ್ರಮುಖ ಬ್ಯಾಂಕಿ'ನ ಸ್ಥಾನದಿಂದ ಕೆಳಗಿಳಿಸಲಾರದು.

**ಸಂದರ್ಶಕ:** ನಿಮ್ಮ ಬ್ಯಾಂಕಿನಲ್ಲಿ ನೌಕರರ ಸಂಘಗಳಿವೆಯೆ? ಅವುಗಳ ಚಟುವಟಿಕೆಗಳ ಬಗ್ಗೆ ಹೇಳುವಿರಾ?

**ಶ್ರೀ ಪೆರೀರಾ:** ನಮ್ಮ ಬ್ಯಾಂಕಿನಲ್ಲಿ ಎರಡು ಸಂಘಗಳಿವೆ. ಒಂದು ಗುಮಾಸ್ತರದಾದರೆ ಇನ್ನೊಂದು ಅಧಿಕಾರ ವರ್ಗದವರದು. ಇಲ್ಲಿ ಈ ಬಗ್ಗೆ ವಿವರಿಸಲು ಅವಕಾಶವಿಲ್ಲದಿರುವುದರಿಂದ ಒಟ್ಟಿನಲ್ಲಿ ಹೇಳುವುದಾದರೆ ಆಡಳಿತ ವರ್ಗ ಮತ್ತು ಈ ಸಂಘಗಳ ಮಧ್ಯದ ಸಂಬಂಧ ತಕ್ಕ ಮಟ್ಟಿಗೆ ಶಾಂತಿಯುತವಾಗಿದೆ.

**ಸಂದರ್ಶಕ:** ನಿಮ್ಮ ವೇತನರಚನೆ ಹೇಗಿದೆ?

**ಶ್ರೀ ಪೆರೀರಾ:** ನಿಮಗೆ ಈ ಬಗ್ಗೆ ಹೆಚ್ಚಿನ ವಿವರವನ್ನು ನೀಡಲು ನಾನು ಅಸಮರ್ಥ. ಯಾಕೆಂದರೆ ಇತ್ತೀಚೆಗಷ್ಟೇ ವೇತನದ ಮರುಪರಿಶೀಲನೆಯಾಗಿದ್ದು ಬ್ಯಾಂಕ್ ನೌಕರರು ಸಾರ್ವಜನಿಕ ವಲಯದ ಇತರ ನೌಕರರಿಗಿಂತ ಹೆಚ್ಚಿನ ವೇತನ ಪಡೆಯುತ್ತಿದ್ದಾರೆ. ಹೊಸ ಗುಮಾಸ್ತನೊಬ್ಬ ಹೆಚ್ಚು ಕಡಿಮೆ 1,200 ಸಿಲೋನ್ ರೂಪಾಯಿಗಳಷ್ಟು ಮಾಸಿಕ ವೇತನ ಪಡೆಯುತ್ತಾನೆ. (ಭಾರತದ ಒಂದು ರೂಪಾಯಿ ಸಿಲೋನಿನ 2½ ರೂಪಾಯಿಗಳಿಗೆ ಸಮ).

**ಸಂದರ್ಶಕ:** ಭಾರತೀಯ ಬ್ಯಾಂಕುಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು?

**ಶ್ರೀ ಪೆರೀರಾ:** ಭಾರತೀಯ ಬ್ಯಾಂಕುಗಳು ಈ ದೇಶದ ಆರ್ಥಿಕ ರಂಗದಲ್ಲಿ ಮಹತ್ವಪೂರ್ಣ ಪಾತ್ರ ವಹಿಸಿವೆ. ಯಾವ ಬ್ಯಾಂಕಾದರೂ ಬಯಸುವುದು ಇದನ್ನೇ. ಇಲ್ಲಿ ನಿಮ್ಮ ಬ್ಯಾಂಕುಗಳು ತಮ್ಮ ಸಾಧನೆಗಳಿಂದ ಸಾರ್ಥಕಗೊಂಡಿವೆ ಎಂದು ನನಗನ್ನಿಸಿದೆ. ನಾನು ಈ ದೇಶಕ್ಕೆ ಬಂದ ಉದ್ದೇಶ ಕೂಡ ನಿಮ್ಮಿಂದ, ಅಂದರೆ ಭಾರತೀಯ ಸ್ಟೇಟ್ ಬ್ಯಾಂಕಿನಂಥ ಅತಿ ದೊಡ್ಡ ಮಹತ್ವಪೂರ್ಣ ಬ್ಯಾಂಕಿನಿಂದ, ಕಲಿತುಕೊಳ್ಳಲು; ನೀವು ನಿಮ್ಮ ಬ್ಯಾಂಕಿನ ಸಿಬ್ಬಂದಿಗಳಿಗೆ ಯಾವ ರೀತಿಯಲ್ಲಿ ತರಬೇತಿ ನೀಡುತ್ತಿದ್ದೀರೆಂಬುದನ್ನು ತಿಳಿದುಕೊಳ್ಳಲು. ನಿಮ್ಮಿಂದ ನಾನಿಲ್ಲಿ ಕಲಿತದ್ದನ್ನು ಅಲ್ಲಿ ಪ್ರಯೋಗಮಾಡಬೇಕಾಗಿದೆ.

ಕೃತಜ್ಞತೆ: **ಪುಷ್ಪಲತಾ, ಉಡುಪಿ**

**ಬ್ಯಾಂಕಿಂಗ್ ಸೇವಾ ವಿಸ್ತರಣೆ**

# ಯೂರೋಕಾರ್ಡ್-ಕಂಪನಿಕಾರ್ಡ್

---

**ಅನು: ಎಂ. ಆರ್. ಮುಕುಂದ ಕುಮಾರ್‌ಜೀ**

ಹೊಸ ಹೊಸ ಗ್ರಾಹಕರನ್ನು ತಮ್ಮತ್ತ ಸೆಳೆದುಕೊಳ್ಳುವುದಕ್ಕೂ ಅವರಿಗೆ ನವೋನವ ವಿಧಾನಗಳಲ್ಲಿ ಸೇವೆ ಒದಗಿಸುವುದಕ್ಕೂ ಪ್ರಪಂಚದ ಬ್ಯಾಂಕುಗಳು ಸದಾ ನಿರತವಾಗಿರುತ್ತವೆ. ಸ್ವಿಟ್ಜರ್ಲೆಂಡಿನ ಬ್ಯಾಂಕುಗಳು ನೀಡುತ್ತಿರುವ ಸೇವೆಯೊಂದನ್ನು ಇಲ್ಲಿ ವಿವರಿಸಲಾಗಿದೆ.

ನಿಮ್ಮದೊಂದು ಭಾರಿ ಉದ್ಯಮ ಸಂಸ್ಥೆ ಇದೆಯೆನ್ನಿ; ಅಥವಾ ನೀವು ಅಂಥ ಕಂಪನಿಯೊಂದರಲ್ಲಿ ಜವಾಬ್ದಾರಿ ಹುದ್ದೆಯಲ್ಲಿದ್ದೀರೆನ್ನಿ. ನೀವೂ ನಿಮ್ಮ ಸಂಸ್ಥೆಯ ಇತರ ಪ್ರಮುಖ ಉದ್ಯೋಗಿಗಳೂ ಅದರ ವ್ಯವಹಾರದ ಅಂಗವಾಗಿ ಪ್ರಪಂಚದ ಹಲವು ಎಡೆಗಳಿಗೆ ಪದೇ ಪದೇ ಸಂಚಾರ ಮಾಡಬೇಕಾಗಬಹುದು. ಆದರೆ ಈ ವೆಚ್ಚವನ್ನು ನಿರ್ದೇಶಿಸಬೇಕಾಗಿ ಬರಬಹುದು. ಪ್ರತಿಸಾರಿ ಪ್ರಯಾಣ ಮಾಡುವಾಗಲೂ ಅಗಾಧವಾದ ಖರ್ಚಿನ ಲೆಕ್ಕ ಇಡಬೇಕಾಗುತ್ತದೆ; ಮುಂಗಡ ನಂಬುಗೆಯ ನಿಯಂತ್ರಣಗಳೇ ಇದಕ್ಕೆ ಪೂರಕವಾಗಬಲ್ಲವು. ಪಡೆಯುವ ಮತ್ತು ಅದಕ್ಕಾಗಿ ಲೆಕ್ಕ ಒಪ್ಪಿಸುವ ವ್ಯವಸ್ಥೆ ಬಹಳ ತೊಡಕಿನದಾಗುತ್ತದೆ. ಖರ್ಚುಗಳ ಮೇಲೆ ಸಮರ್ಪಕವಾದ ನಿಯಂತ್ರಣ ಸಾಧಿಸುವುದೂ ಕಠಿಣವೇ.

ಈ ಸಮಸ್ಯೆಯನ್ನು ಪರಿಹರಿಸಲು ಸ್ವಿಟ್ಜರ್ಲೆಂಡಿನ ಬ್ಯಾಂಕುಗಳು ಒಂದು ಹೊಸ ವ್ಯವಸ್ಥೆಯನ್ನು ಜಾರಿಗೆ ತಂದಿವೆ. 'ಯೂರೋಕಾರ್ಡ್-ಕಂಪೆನಿಕಾರ್ಡ್' ಎಂಬುದು ಈ ವ್ಯವಸ್ಥೆ. ಇಂಥ ಖರ್ಚಿನ ಲೆಕ್ಕಕ್ಕೆ ಸಂಬಂಧಿಸಿದ ಪ್ರಕ್ರಿಯೆಯನ್ನು ಸರಳಗೊಳಿಸುವುದೇ ಅಲ್ಲದೆ ಈ ವೆಚ್ಚಗಳನ್ನು ಸುಲಭವಾಗಿ ನಿಯಂತ್ರಣಕ್ಕೆ ಒಳಪಡಿಸುವುದು ಇದರಿಂದ ಸಾಧ್ಯವಾಗುತ್ತದೆ.

## ಸ್ವರೂಪ, ಕ್ರಿಯಾವಿಧಾನ

ಇದು ಹೇಗೆ? ಎಂಬ ಪ್ರಶ್ನೆಗೆ ಉತ್ತರ ಹೀಗಿದೆ:

ಹಣವನ್ನೇ ಕೊಡದೆ ಪ್ರಪಂಚದ ಯಾವ ಮೂಲೆಯಲ್ಲಾದರೂ ಖರ್ಚು ಮಾಡುವ ವ್ಯವಸ್ಥೆಯಿದು. ಎರಡು ವರ್ಷ ಹಿಂದೆ ವ್ಯಕ್ತಿಗಳಿಗೆ ಸಂಬಂಧಿಸಿದಂತೆ ಈ ವ್ಯವಸ್ಥೆಯನ್ನು ಸ್ವಿಸ್ ಬ್ಯಾಂಕುಗಳು ಜಾರಿಗೆ ತಂದುವು. ಈಗ ಇದನ್ನು ಅವು ಕಂಪನಿಗಳಿಗೂ ವಿಸ್ತರಿಸಿವೆ. ಕಂಪನಿಯ ವ್ಯವಹಾರಕ್ಕೆ ಸಂಬಂಧಿಸಿದಂತೆ ಸಂಚರಿಸುವ ಅದರ ವ್ಯವಸ್ಥಾಪಕರೂ, ಇತರ ಉದ್ಯೋಗಿಗಳೂ ಈ ಸೌಲಭ್ಯ ಪಡೆಯಬಹುದು. ಸ್ವಿಸ್ ಬ್ಯಾಂಕುಗಳ ಯೂರೋಕಾರ್ಡ್ ಸಂಸ್ಥೆ ನೀಡುವ ಕಾರ್ಡನ್ನು ಇಂಥವರು ಹೊಂದಿದ್ದರೆ ಸಾಕು. ಇದರ ಬಲದ ಮೇಲೆ ಇವರು ಸಹಿ ಮಾಡಿ, ನಗದು ಕೊಡದೆಯೇ, ಅವಶ್ಯವಾದ ಸರಕುಗಳನ್ನು ಪ್ರಪಂಚದ ಐದು ಖಂಡಗಳ ನೂರು ದೇಶಗಳಲ್ಲಿ ಮೂವತ್ತು ಲಕ್ಷ ಸಂಸ್ಥೆಗಳ ಪೈಕಿ ಯಾವುದರಿಂದಲಾದರೂ ಪಡೆಯಬಹುದು. ಅವರು ಮಾಡಬೇಕಾದ್ದು ಇಷ್ಟೆ: ತಮಗೆ ಸ್ವಿಸ್ ಬ್ಯಾಂಕುಗಳ ಯೂರೋಕಾರ್ಡ್ ಸಂಸ್ಥೆ ನೀಡಿದ ಕಾರ್ಡನ್ನು ತೋರಿಸುವುದು. ಕೊಂಡ ಸರಕಿನ ಬಿಲ್ಲನ್ನು ಪರಿಶೀಲಿಸಿ ಅದಕ್ಕೆ ಸಹಿ ಹಾಕುವುದು. ಯಾವ ಕಂಪನಿಯ ಪರವಾಗಿ ಅವರು ಸರಕನ್ನು ಕೊಂಡಿದ್ದಾರೋ ಆ ಕಂಪನಿಗೆ ಸ್ವಿಸ್ ಸಂಸ್ಥೆ ಒಂದು ತಃಖ್ತೆಯನ್ನು ಸ್ವಿಸ್ ಫ್ರಾಂಕ್ ಹಣದಲ್ಲಿ ಕಳುಹಿಸುತ್ತದೆ. ಪ್ರತಿಯೊಂದು ವ್ಯವಹಾರವನ್ನೂ ಅದರಲ್ಲಿ ತಪಶೀಲಾಗಿ ನಮೂದಿಸಲಾಗಿರುತ್ತದೆ. ಕಂಪನಿಯ ಹಲವು ಉದ್ಯೋಗಿಗಳ ಹೆಸರುಗಳಲ್ಲಿ ಇಂಥ ಹಲವು ಕಾರ್ಡುಗಳನ್ನು

ಕೊಟ್ಟಿದ್ದ ಪಕ್ಷದಲ್ಲಿ ಅವಶ್ಯವೆನಿಸಿದರೆ ಪ್ರತಿಯೊಂದು ಕಾರ್ಡಿಗೂ ಪ್ರತ್ಯೇಕವಾಗಿ ನಮೂದಿಸಲಾದ ಮಾಸಿಕ ತಃಖ್ತೆಯನ್ನು ನೀಡುತ್ತದೆ. ಇವುಗಳ ಪ್ರಕಾರ ಪಾವತಿ ಮಾಡುವುದು ಸುಲಭ. ತಮ್ಮ ಬ್ಯಾಂಕು ಆ ಖಾತೆಗೆ ಖಣಿಸುವಂತೆ ವ್ಯವಸ್ಥೆ ಮಾಡಬಹುದು. ಈ ವಿಧಾನ ಬೇಡವೆಂದರೆ ಚೆಕ್ಕು ನೀಡಬಹುದು, ಇಲ್ಲವೇ ಪಾವತಿ ಮಾಡಬೇಕೆಂದು ಬ್ಯಾಂಕಿಗೆ ಯಥಾಯೋಗ್ಯವಾದ ಆದೇಶ ನೀಡಬಹುದು. ಹೀಗೆ ಪಾವತಿಗೆ ಸಂಬಂಧಿಸಿದ ಆಡಳಿತ ಪ್ರಕ್ರಿಯೆಯೂ ಕಾರ್ಡಿನ ಬಳಕೆಯಷ್ಟೇ ಸುಲಭವಾದ್ದು. ಕಂಪನಿಯ ಪರವಾಗಿ ಸಂಚಾರ ಮಾಡುವವರಿಗೆ ಪಾವತಿ ಮಾಡುವ ನಗದು ಮುಂಗಡವನ್ನು ಕನಿಷ್ಠ ಮಿತಿಗೆ ಇಳಿಸಬಹುದು. ಆದ್ದರಿಂದ ಸಂಚಾರ ಕಾಲದಲ್ಲಿ ಹಣವನ್ನು ಕಳೆದುಕೊಳ್ಳುವ ಅಪಾಯ ಕಡಿಮೆ. ಇದರಿಂದ ಕಂಪನಿಯ ಅಧಿಕಾರಿಗಳಿಗೂ ಒಳಿತು, ಕಂಪನಿಗೂ ಒಳಿತು. ಒಂದು ವೇಳೆ ಯೂರೋಕಾರ್ಡ್ ಕಳೆದು ಹೋಯಿತನ್ನಿ. ಕೂಡಲೇ ಇದನ್ನು ತಿಳಿಸಿದ ಪಕ್ಷದಲ್ಲಿ ಕಂಪನಿಗಾಗಲಿ ಸಂಬಂಧಪಟ್ಟ ನೌಕರರಿಗಾಗಲೀ ಏನೂ ನಷ್ಟ ತಗಲದು. ಇದು ಕಳೆದು ಹೋಗಿರುವ ಸಂಗತಿ ಕೂಡಲೆ ಪತ್ತೆಯಾಗದೆ ಇದ್ದಾಗ್ಯೂ, ಅದರಿಂದಾಗುವ ಗರಿಷ್ಠ ನಷ್ಟವೆಂದರೆ 100 ಸ್ವಿಸ್ ಫ್ರಾಂಕುಗಳು ಮಾತ್ರ. ಈ ಕಾರ್ಡಿನಿಂದ ಕಂಪನಿಗಳಿಗೆ ಇನ್ನೊಂದು ದೊಡ್ಡ ಲಾಭವುಂಟು. ಹಲವಾರು ದೇಶಗಳಲ್ಲಿ ಸಂಚರಿಸುವ ನೌಕರರು ಪದೇ ಪದೇ ಹಣವನ್ನು ಆಯಾ ದೇಶಗಳ ನಾಣ್ಯಗಳಿಗೆ ಪರಿವರ್ತಿಸುವ ಅವಶ್ಯಕತೆ ಇಲ್ಲದೆ ವ್ಯವಹಾರ ನಡಸಬಹುದಾಗಿದೆ.

**ಸೌಲಭ್ಯ**

ಯೂರೋಕಾರ್ಡ್-ಕಂಪನಿಕಾರ್ಡ್‌ನಿಂದ ಕಂಪನಿಗಳಿಗೆ ಆಡಳಿತ ಸುಲಭವಾಗುತ್ತದೆ ಮಾತ್ರವಲ್ಲ. ಆರ್ಥಿಕವಾಗಿಯೂ ಇದರಿಂದ ಲಾಭವುಂಟು. ಉದಾಹರಣೆಗೆ, ಕಂಪನಿಗೆ ಬೇಕಾದ ಸರಕನ್ನು ಮತ್ತು ಅಗತ್ಯವಾದ ಸಾಮಗ್ರಿಗಳನ್ನು ಬಡ್ಡಿರಹಿತವಾಗಿ ನಾಲ್ಕು ವಾರಗಳಿಂದ ಆರು ವಾರಗಳ ವರೆಗೆ ಪಡೆಯಬಹುದು. ಕಾರ್ಡ್ ಉಪಯೋಗಿಸಿದ ದಿನದಿಂದ ಸರಕಿನ ಪಟ್ಟಿ ಕೈ ಸೇರುವ ದಿನದ ವರೆಗೆ ಆ ಕಂಪನಿಗೆ ಬಡ್ಡಿರಹಿತ ಮುಂಗಡ ದೊರೆತಂತಾಗಿ ಇದರಿಂದ ಕಂಪನಿಗೆ ಲಾಭವಾಗುತ್ತದೆ.

ಯೂರೋಕಾರ್ಡನ್ನು ಪ್ರವೇಶ ಶುಲ್ಕವಿಲ್ಲದೆ ಕಂಪನಿ ಪಡೆಯಬಹುದು. ಆದರೆ ಕಂಪನಿ ಪಡೆಯುವ ಮೊದಲನೆಯ ಕಾರ್ಡಿಗೆ ವರ್ಷಕ್ಕೆ ನೂರು ಸ್ವಿಸ್ ಫ್ರಾಂಕ್ ಕೊಡಬೇಕಾಗುತ್ತದೆ. ಹೆಚ್ಚಿನ ಕಾರ್ಡುಗಳು ಬೇಕಾದಲ್ಲಿ ಪ್ರತಿ ಕಾರ್ಡಿಗೂ 50 ಸ್ವಿಸ್ ಫ್ರಾಂಕ್‌ಗಳನ್ನು ಕೊಡಬೇಕು.

ಯೂರೋಕಾರ್ಡ್-ಕಂಪನಿಕಾರ್ಡುಗಳಲ್ಲಿ ಎರಡು ಬಗೆಗಳುಂಟು. ಅದು ಕಂಪನಿಯ ಹೆಸರಿನಲ್ಲಿ ಇರಬಹುದು. ಅಥವಾ ಕಂಪನಿಯ ಹೆಸರು ಇಲ್ಲದೆ ಇರಬಹುದು. ಎರಡರಲ್ಲೂ ಕಾರ್ಡುದಾರರ ಹೆಸರು ಇದ್ದೇ ಇರುತ್ತದೆ. ಕಾರ್ಡನ್ನು ವರ್ಗಾಯಿಸುವಂತಿಲ್ಲ. ಕಂಪನಿಕಾರ್ಡು ಯೋಜನೆಯಲ್ಲಿ ಮೂಲತಃ ಇಬ್ಬರು ಜವಾಬ್ದಾರರಾಗಿರುತ್ತಾರೆ. ಯೂರೋಕಾರ್ಡ್ ಕರಾರಿಗೆ ಸಹಿ ಹಾಕುವ ಕಂಪನಿಯೂ, ಕಾರ್ಡುಗಳನ್ನು ಬಳಸುವ ಸಿಬ್ಬಂದಿಯೂ ಇದಕ್ಕೆ ಹೊಣೆ. ಹೊಸ ಕಾರ್ಡುಗಳು ಬೇಕಾದಾಗ ಕಂಪನಿ ಅದಕ್ಕಾಗಿ ಕೋರಿಕೆ ಸಲ್ಲಿಸಬೇಕು. ಅದನ್ನು ಪಡೆದು ಬಳಸುವ ಅಧಿಕಾರ ಯಾರಿಗೆ ಇರುತ್ತದೆಯೆಂಬುದನ್ನು ಕಂಪನಿಯೇ ತೀರ್ಮಾನಿಸಬೇಕು.

ಪರಸ್ಪರ ನಂಬುಗೆಯ ವಾತಾವರಣದ ನಿರ್ಮಾಣವೇ ವ್ಯವಹಾರ ಮಾಡಲು ಯಾವಾಗಲೂ ಉತ್ತಮ ಮಾರ್ಗ. ತನ್ನ ನೌಕರರು ಪ್ರವಾಸದಲ್ಲಿ ಯಾವ ರೀತಿಯ ಪ್ರಭಾವ ಬೀರಬಲ್ಲರು ಎಂಬುದರಲ್ಲಿ ಪ್ರತಿಯೊಂದು ಕಂಪನಿಯೂ ಆಸಕ್ತಿ ತಳೆದಿರುವುದು ಸಹಜವೇ. ಈ ದೃಷ್ಟಿಯಿಂದ ಯೂರೋಕಾರ್ಡ್–ಕಂಪನಿಕಾರ್ಡ್ ಹೊಂದಿರುವವರು ಪ್ರಪಂಚದಲ್ಲಿ ಎಲ್ಲೆಲ್ಲೂ ನಂಬಿಕೆಗೆ, ಪ್ರತ್ಯಯಕ್ಕೆ, ಪಾತ್ರರಾಗಿರುತ್ತಾರೆ. ಏಕೆಂದರೆ ಈ ಕಾರ್ಡಿನ ಹಿಂದೆ ಸ್ವಿಸ್ ಬ್ಯಾಂಕುಗಳ ಸಮಷ್ಟಿಪ್ರತಿಷ್ಠೆಯ ಬಲ ಇರುತ್ತದೆ. 1979ರ ಆರಂಭದಿಂದಲೂ ಯೂರೋಕಾರ್ಡ್ ಸಂಸ್ಥೆಯ (ಸ್ವಿಟ್‌ಜರ್ಲೆಂಡ್) ಒಡೆತನ ಹೊಂದಿರುವವು ಈ ಬ್ಯಾಂಕುಗಳೇ. ಅವರು ಸ್ವಿಸ್ ಬ್ಯಾಂಕೊಂದರ ನಂಬಿಕಸ್ತ ಗ್ರಾಹಕರೆಂಬುದಾಗಿ ಪರಿಗಣಿಸಲ್ಪಡುತ್ತಾರೆ. ಇದರಿಂದ ಅವರಿಗೆ—ಅವರ ಕಂಪನಿಗೆ—ಹೊಸ ಹೊಸ ವ್ಯವಹಾರಗಳ ದ್ವಾರಗಳೇ ತೆರೆದುಕೊಳ್ಳಬಹುದು. ಇವುಗಳಿಂದಾಗಿ ಪ್ರಪಂಚಾದ್ಯಂತ ಸರಕುಗಳಿಗೆ ಮೂವತ್ತು ಲಕ್ಷ ನೆಲೆಗಳ ಬಾಗಿಲು ತೆರೆದಿರುತ್ತವೆಂಬುದಂತೂ ಖಂಡಿತ.

ಆಧಾರ : ಸ್ವಿಸ್ ಬ್ಯಾಂಕ್ ಕಾರ್ಪೊರೇಷನ್‌ನ ತ್ರೈಮಾಸಿಕ Prospectus 1980/2.

# ಬ್ಯಾಂಕುಗಳ ವಣಿಕ ಬ್ಯಾಂಕಿಂಗ್ ವಿಭಾಗ

ಬಿ. ಎಸ್. ಚಂದ್ರಶೇಖರ

ಭಾರತದ ಬ್ಯಾಂಕುಗಳು ಸಾಮಾಜಿಕ ಪ್ರಜ್ಞೆಯನ್ನು ಬೆಳೆಸಿಕೊಳ್ಳುತ್ತಲೇ ಬರುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ರಾಷ್ಟ್ರೀಕರಣದೊಂದಿಗೆ ಅನೇಕ ಬ್ಯಾಂಕುಗಳ ಸಾಮಾಜಿಕ ಪ್ರಜ್ಞೆಯನ್ನು ಬಡಿದೆಬ್ಬಿಸಿದಂತಾಯಿತು, ನಿಜ. ಆದರೆ ಹಲವು ಬ್ಯಾಂಕುಗಳು ಮೊದಲಿನಿಂದಲೂ ಸಾಮಾಜಿಕ ಪ್ರಜ್ಞೆಯನ್ನು ಮೈಗೂಡಿಸಿಕೊಂಡೇ ಇದ್ದುವೆಂದು ಹೇಳ ಬೇಕು. ಕೇಂದ್ರ ಸರ್ಕಾರದ ಆರ್ಥಿಕ ಯೋಜನೆಗಳನ್ನು ಯಶಸ್ವಿಯಾಗಿಸುವಲ್ಲಿ ಬ್ಯಾಂಕುಗಳ ಪಾತ್ರ ಮಹತ್ತರ ವಾದದ್ದು.

ಈ ಸಾಮಾಜಿಕ ಪ್ರಜ್ಞೆ ಪೂರ್ಣವಾಗಿ ಸರ್ಕಾರದ ಒತ್ತಾಯದಿಂದ ಬಂದುದಲ್ಲ. ತುಳಿದ ಜಾಡನ್ನೇ ತುಳಿಯುತ್ತ ನಡೆಯುವುದು ಯಾವ ಪ್ರಗತಿಶೀಲ ಸಂಸ್ಥೆಗೆ ತಾನೇ ಸಾಧ್ಯವಾದೀತು? ತನ್ನ ಸೇವೆಯ ಪರಿಧಿಯನ್ನು ಹಿಗ್ಗಿಸಿ ಕೊಳ್ಳುವುದು ಬ್ಯಾಂಕುಗಳಿಗೆ ತೀರ ಆವಶ್ಯಕವೆನಿಸತೊಡಗಿದ್ದು ಸಹಜ. ಆದ್ದರಿಂದ ಬ್ಯಾಂಕುಗಳು ವ್ಯವಸಾಯ, ಸಣ್ಣ ಕೈಗಾರಿಕೆ, ಸಣ್ಣ ಉದ್ಯಮ ಮತ್ತಿತರ ಚಟುವಟಿಕೆಗಳಿಗೆ ಉದಾರ ಸಹಾಯ ನೀಡತೊಡಗಿದ್ದಲ್ಲದೆ ಗ್ರಾಮಗಳ ದತ್ತು ಸ್ವೀಕಾರದಂಥ ಚಟುವಟಿಕೆಗಳಿಗೂ ಕೈಹಾಕಲು ಹೆದರಲಿಲ್ಲ. ಇಂಥದೇ ಇನ್ನೊಂದು ದಿಟ್ಟ ಹೆಜ್ಜೆಯೆಂದರೆ ಬ್ಯಾಂಕುಗಳಲ್ಲಿ ವಣಿಕ ಬ್ಯಾಂಕಿಂಗ್ ವಿಭಾಗದ (ಮರ್ಚೆಂಟ್ ಬ್ಯಾಂಕಿಂಗ್ ಡಿವಿಷನ್) ಸ್ಥಾಪನೆ. ಇದರ ಮುಖ್ಯ ಉದ್ದೇಶವೆಂದರೆ ಸಾರ್ವಜನಿಕ ಮತ್ತು ಖಾಸಗಿ ಕಂಪನಿಗಳಿಗೆ ಹಲವು ವಿಶಿಷ್ಟ ರೀತಿಯ ಸೇವೆ ಸಲ್ಲಿಸುವುದು.

ಭಾರತದ ಬ್ಯಾಂಕಿಂಗ್ ಇತಿಹಾಸದಲ್ಲಿ 1972ರಲ್ಲಿ ಪ್ರಥಮ ಬಾರಿಗೆ ಭಾರತೀಯ ಸ್ಟೇಟ್ ಬ್ಯಾಂಕು ತನ್ನ ಕೇಂದ್ರ ಕಛೇರಿಯಲ್ಲಿ ವಣಿಕ ಬ್ಯಾಂಕಿಂಗ್ ವಿಭಾಗವನ್ನು ಸ್ಥಾಪಿಸಿತು. ಇತ್ತೀಚಿನ ವರ್ಷಗಳಲ್ಲಿ ಆ ಬ್ಯಾಂಕಿನ ಅಹಮದಾಬಾದ್, ಕಲ್ಕತ್ತ, ಮದರಾಸ್, ಮುಂಬೈ ಮತ್ತಿತರ ಸ್ಥಳೀಯ ಪ್ರಧಾನ ಕಛೇರಿಗಳಲ್ಲಿ ವಣಿಕ ಬ್ಯಾಂಕಿಂಗ್ ಬ್ಯೂರೋಗಳು ತೆರೆಯಲ್ಪಟ್ಟುವು. ಇತರ ಹಲವು ಬ್ಯಾಂಕು ಗಳೂ ವಣಿಕ ಬ್ಯಾಂಕಿಂಗ್ ವಿಭಾಗ ಹೊಂದಿವೆ.

**ವಿಭಾಗದ ಚಟುವಟಿಕೆಗಳು**

ಇನ್ನು ಈ ವಿಭಾಗದ ಚಟುವಟಿಕೆಗಳನ್ನು ವಿವರವಾಗಿ ನೋಡೋಣ:

1 ಖಾಸಗಿ ಅಥವಾ ಸಾರ್ವಜನಿಕ ಕಂಪನಿಯ ಆರಂಭ ಮತ್ತು ನಿರ್ವಹಣೆ ಸುಲಭಸಾಧ್ಯವಲ್ಲ. ಕಂಪನಿಗಳನ್ನು ಆರಂಭಿಸುವುದಕ್ಕೆ ಅನೇಕ ನೀತಿ ನಿಬಂಧನೆಗಳುಂಟು. ಅದಕ್ಕೆ ತನ್ನದೇ ಆದ ವಿಶಿಷ್ಟ ಕ್ರಮವೂ ಉಂಟು. ಹಣವನ್ನೂ ಉತ್ಸಾಹವನ್ನೂ ತಾಂತ್ರಿಕ ಜ್ಞಾನವನ್ನೂ ಉಳ್ಳ ಹಲವರಿದ್ದ ಮಾತ್ರಕ್ಕೆ ಈ ಕೆಲಸ ಸುಲಭವಾಗಿ ಮಾಡಲು ಸಾಧ್ಯ ವಾಗುವುದಿಲ್ಲ. ಅದಕ್ಕೆ ನುರಿತ ಸಲಹೆಗಾರರ ಆವಶ್ಯಕತೆ ಯಿದೆ. ಈ ಸಲಹೆ ನೀಡುವ ಸೇವೆಯನ್ನು ವಣಿಕ ಬ್ಯಾಂಕಿಂಗ್ ವಿಭಾಗ ನಿರ್ವಹಿಸುತ್ತದೆ. ಅಸಿಂಧುವಾದ ಯೋಜನೆ ಗಳನ್ನು ಆರಂಭದಲ್ಲಿಯೇ ಗುರುತಿಸುವುದು ಇಲ್ಲಿ ಸಾಧ್ಯ ವಾಗುತ್ತದೆ.

2 ಒಂದು ಕಂಪನಿಯ ಪರಿಯೋಜನೆ (ಪ್ರಾಜೆಕ್ಟ್) ತಾಂತ್ರಿಕ ವಾಗಿ ಸಮರ್ಪಕವಾಗಿದೆಯೆಂದು ಕಂಡುಬಂದ ಅನಂತರ ಅದನ್ನು ಕಾರ್ಯಗತಗೊಳಿಸಲು ಅಣಿಯಾಗಬೇಕಷ್ಟೆ? ಕಂಪನಿ ತನ್ನ ಕಾರ್ಯವನ್ನು ಆರಂಭಿಸಲು ಹಣದ ಆವಶ್ಯಕತೆ ಯಿರುತ್ತದೆ ಎಂಬುದು ತಿಳಿದ ವಿಷಯ. ಈ ಹಣವನ್ನು ಒಂದೇ ಬ್ಯಾಂಕು ಸಾಲವಾಗಿ ನೀಡುವುದು ಅನೇಕ ಬಾರಿ ಸಾಧ್ಯವಾಗುವುದಿಲ್ಲ. ಅದಕ್ಕೆ ಹಲವು ಬ್ಯಾಂಕುಗಳ ಮೊರೆ ಹೋಗಬೇಕಾಗುತ್ತದೆ. ಬ್ಯಾಂಕುಗಳಲ್ಲದೆ ಇತರ ಹಲವು ಸಂಸ್ಥೆಗಳು ದೀರ್ಘಕಾಲಿಕ ಸಾಲಗಳನ್ನು ನೀಡುತ್ತವೆ. ಭಾರತದ ಕೈಗಾರಿಕಾಭಿವೃದ್ಧಿ ಬ್ಯಾಂಕ್, ಭಾರತದ ಕೈಗಾರಿಕಾ ಸಾಲ ಮತ್ತು ಹಣ ಹೂಡಿಕೆ ನಿಗಮ ಮುಂತಾದವು ಇಂಥ ಹಲವು ಸಂಸ್ಥೆಗಳು. ಈ ಸಂಸ್ಥೆಗಳಿಂದ ಕೈಗಾರಿಕೆ ಗಳಿಗೆ ಬೇಕಾದ ಹಣ ರಿಯಾಯಿತಿ ದರಗಳಲ್ಲಿ ಸಾಲವಾಗಿ ದೊರೆಯುವುದು. ಇಂಥ ವಿಷಯಗಳನ್ನು ಕೈಗಾರಿಕೋದ್ಯಮಿ ತಿಳಿಯದಿರುವ ಸಾಧ್ಯತೆಗಳುಂಟು. ತಿಳಿದಿದ್ದರೂ ಅದನ್ನು ಪಡೆಯಲು ಅನುಸರಿಸಬೇಕಾದ ಸರಿಯಾದ ಕ್ರಮದ ಸ್ಪಷ್ಟ ತಿಳಿವಳಿಕೆಯಿರುವುದಿಲ್ಲ. ಹೀಗಾಗಿ, ನೇರವಾಗಿ ಅವು

ಗಳೊಡನೆ ವ್ಯವಹರಿಸಲು ಹೋದಲ್ಲಿ ಅನೇಕ ರೀತಿಯ ಎಡರು ತೊಡರುಗಳುಂಟಾಗುವ ಸಾಧ್ಯತೆಗಳೇ ಹೆಚ್ಚು. ಉದಾಹರಣೆಗೆ, ಆ ಸಂಸ್ಥೆಗಳಿಗೆ ಬೇಕಾಗುವ ಮಾಹಿತಿಗಳೇನೆಂಬುದರ ಅರಿವಿಲ್ಲದಿದ್ದರೆ ಪತ್ರವ್ಯವಹಾರ ದೀರ್ಘವಾಗಿ ಬೆಳೆಯುತ್ತ ಹೋಗಿ ಅನಾವಶ್ಯಕವಾಗಿ ತಡವಾಗುತ್ತದೆ. ವಣಿಕ ಬ್ಯಾಂಕಿಂಗ್ ವಿಭಾಗದಲ್ಲಿಯ ನುರಿತ ಅಧಿಕಾರಿಗಳಿಗೆ ಈ ಸಂಸ್ಥೆಗಳ ಕಾರ್ಯವಿಧಾನ ಕರತಲಾಮಲಕವಾಗಿರುವುದರಿಂದ ಈ ವಿಭಾಗದ ಸೇವೆಯನ್ನು ಉಪಯೋಗಿಸಿಕೊಂಡರೆ ಕಂಪನಿಗಳ ಕೆಲಸ ಸುಗಮವಾಗುತ್ತದೆ. ಕಂಪನಿಯ ಪರವಾಗಿ ಬ್ಯಾಂಕಿನ ಈ ವಿಭಾಗವೇ ಸಾಲವನ್ನು ಕ್ರೋಡೀಕರಿಸಲು ಮುಂದಾಗುತ್ತದೆ (ಸಿಂಡಿಕೇಷನ್ ಆಫ್ ಲೋನ್ಸ್). ಭಾರತದ ಕೈಗಾರಿಕಾಭಿವೃದ್ಧಿ ಬ್ಯಾಂಕ್ (ಇಂಡಸ್ಟ್ರಿಯಲ್ ಡೆವಲಪ್‌ಮೆಂಟ್ ಬ್ಯಾಂಕ್ ಆಫ್ ಇಂಡಿಯ—ಐ.ಡಿ.ಬಿ.ಐ.) ಭಾರತದ ಕೈಗಾರಿಕಾ ಸಾಲ ಮತ್ತು ಹಣ ಹೂಡಿಕೆ ನಿಗಮ (ಇಂಡಸ್ಟ್ರಿಯಲ್ ಕ್ರೆಡಿಟ್ ಅಂಡ್ ಇನ್‌ವೆಸ್ಟ್‌ಮೆಂಟ್ ಕಾರ್ಪೊರೇಷನ್ ಆಫ್ ಇಂಡಿಯ—ಐ.ಸಿ.ಐ.ಸಿ.ಐ) ಇವುಗಳ ಅಧಿಕಾರಿಗಳನ್ನು ಬ್ಯಾಂಕುಗಳು ಸಂದರ್ಶಿಸಿ ಕಂಪನಿಗೆ ಬೇಕಾದ ಆರ್ಥಿಕ ನೆರವನ್ನೊದಗಿಸುವ ಹೊಣೆಯನ್ನು ಈ ವಿಭಾಗ ನಿರ್ವಹಿಸುತ್ತದೆ. ಹೀಗೆ ಕಂಪನಿಗಳು ವಣಿಕ ಬ್ಯಾಂಕಿಂಗ್ ವಿಭಾಗದ ಸಹಾಯದಿಂದ ಸಮಯ ಮತ್ತು ಶಕ್ತಿಗಳ ಮಿತವ್ಯಯವನ್ನು ಸಾಧಿಸಬಹುದು. ಕಂಪನಿ ಹೊಸದಾದಲ್ಲಿ ಈ ಸೇವೆಯ ಮಹತ್ವ ಇನ್ನಷ್ಟು ಹೆಚ್ಚುವುದು ಎಂಬುದು ಗಮನಾರ್ಹ.

3 ಹೊಸ ಕಂಪನಿ ತನ್ನ ಷೇರುಗಳನ್ನು ಸಾರ್ವಜನಿಕರಿಗೆ ತೆರೆದಿಡುತ್ತದೆ. ಆಸಕ್ತರು ಕಂಪನಿಯ ಷೇರುದಾರರಾಗಬಹುದು. ಷೇರುಗಳನ್ನು ನೀಡುವ ಕ್ರಮ ಭಾರತದ ಕಂಪನಿ ಅಧಿನಿಯಮದ ನಿಬಂಧನೆಗಳಿಗೆ ಬದ್ಧವಾಗಿರಬೇಕು. ಇಲ್ಲಿ ಕಂಪನಿ ಕಾನೂನಿನ ತಜ್ಞರ ನೆರವು ಅತ್ಯಾವಶ್ಯಕ. ವಣಿಕ ಬ್ಯಾಂಕಿಂಗ್ ವಿಭಾಗದಲ್ಲಿ ಇಂಥ ತಜ್ಞರ ನೆರವು ದೊರೆಯುತ್ತದೆ. ವಿವರಣ ಪತ್ರಗಳನ್ನು (ಪ್ರಾಸ್ಪೆಕ್ಟಸ್) ಮುದ್ರಿಸುವುದು; ಅದರಲ್ಲಿ ಮುದ್ರಿಸಬೇಕಾದ ವಿಷಯಗಳನ್ನು ನಿರ್ಧರಿಸಿ ಸಂಗ್ರಹಿಸಿ ತಿದ್ದಿ ಒಪ್ಪವಾಗಿ ಕಂಪನಿ ಕಾನೂನಿಗನುಗುಣವಾಗುವಂತೆ ಮುದ್ರಿಸಿ ಆಸಕ್ತ ಸಾರ್ವಜನಿಕರ ಕೈಸೇರುವಂತೆ ಮಾಡುವುದು; ಷೇರುಗಳಿಗೆ ಅರ್ಜಿಗಳನ್ನು ಮುದ್ರಿಸಲು ವ್ಯವಸ್ಥೆ ಮಾಡುವುದು; ಈ ಷೇರುಗಳ ಬಿಡುಗಡೆಯನ್ನು ಪ್ರಮುಖ ವೃತ್ತಪತ್ರಿಕೆಗಳಲ್ಲಿ ಜಾಹೀರಾತುಗಳ ಮೂಲಕ ಸಾರ್ವಜನಿಕರಲ್ಲಿ ಘೋಷಿಸುವುದು; ಕಂಪನಿ ಕಾನೂನು ನಿಯಮಿಸಿರುವಂತೆ ಇವೆಲ್ಲಕ್ಕೂ ಯುಕ್ತ ಸಮಯಾವಕಾಶವನ್ನು ಕಲ್ಪಿಸುವುದು; ನಿರೀಕ್ಷಿತ ಪ್ರಮಾಣದಲ್ಲಿ ಷೇರುಗಳು ಸಾರ್ವಜನಿಕರಲ್ಲಿ ಮಾರಾಟವಾಗದೆ ಹೋದ ಪಕ್ಷದಲ್ಲಿ ಅವನ್ನು ಕೊಳ್ಳಲು ಸಿದ್ಧರಾಗಿರುವವರನ್ನು (ಷೇರುಗಳ ಬಿಡುಗಡೆ ಮಾಡುವ ಮೊದಲೇ) ಕಂಡು ಅವರೊಡನೆ ಒಪ್ಪಂದಕ್ಕೆ ಬರುವುದು. (ಷೇರು ಕೊಳ್ಳಿಕೆ ಭರವಸೆ ವ್ಯವಸ್ಥೆ: ಅರೇಂಜಿಂಗ್ ಫಾರ್ ಅಂಡರ್ ರೈಟಿಂಗ್); ದೇಶದ ವಿವಿಧ ಕೇಂದ್ರಗಳಲ್ಲಿ ಷೇರುಗಳು ಮಾರಾಟವಾಗಲು ಅನುವಾಗಲು ವಿವಿಧ ನಗರಗಳಲ್ಲಿ ಕ್ರಿಯಾಶೀಲರಾದ ದಳ್ಳಾಳಿಗಳ ಸಹಾಯ ಪಡೆಯುವುದು; ಬ್ಯಾಂಕುಗಳ ಶಾಖೆಗಳಲ್ಲಿ ಅರ್ಜಿಯನ್ನೂ, ಅರ್ಜಿಯ ಹಣವನ್ನೂ ಸ್ವೀಕರಿಸಲು ವ್ಯವಸ್ಥೆ ಮಾಡುವುದು—ಈ ಎಲ್ಲ ಹೊಣೆ ವಣಿಕ ಬ್ಯಾಂಕಿಂಗ್ ವಿಭಾಗದ್ದು. ಮುದ್ರಕರೊಂದಿಗೆ, ದಳ್ಳಾಳಿಗಳೊಂದಿಗೆ ವ್ಯವಹಾರದ ಜವಾಬ್ದಾರಿಯೂ ಇದರದೇ. ಇದಲ್ಲದೆ ಷೇರು ನೀಡಿಕೆಯ ಬಗ್ಗೆ ಪತ್ರಿಕಾಗೋಷ್ಠಿ ಏರ್ಪಡಿಸುವುದಕ್ಕೂ ಇದರದೇ ಮುಂದಾಳುತನ.

4 ಹಣ ಹೂಡಿಕೆಗೆ ಈ ವಿಭಾಗ ಸಲಹೆಗಳನ್ನು ನೀಡುತ್ತದೆ. ಕಂಪನಿಗಳು ತಮ್ಮ ಹಣವನ್ನು ಲಾಭದಾಯಕವಾಗಿ ತೊಡಗಿಸಲು ವಿಭಾಗ ಸಲಹೆಗಳನ್ನು ನೀಡುವುದು; ಮತ್ತು ಅವಶ್ಯವಿದ್ದಲ್ಲಿ ತಾನೇ ಕಂಪನಿಯ ಹೆಚ್ಚಿನ ಹಣವನ್ನು ನಿರ್ವಹಿಸುವುದು. ಹಣದ ಹೂಡಿಕೆಯಲ್ಲಿರುವ ತೊಡಕುಗಳು ವಿಚಿತ್ರ. ಬ್ಯಾಂಕುಗಳು ಮತ್ತು ರಾಷ್ಟ್ರೀಯ ಉಳಿತಾಯ ಸರ್ಟಿಫಿಕೇಟುಗಳಿಂದ ನಿರಪಾಯವಾಗಿ ಆಕರ್ಷಕ ಬಡ್ಡಿ ದೊರೆಯುವುದು ನಿಜ. ಆದರೆ ಹಣದುಬ್ಬರದ ದರ ಹೀಗೆಯೇ ಇದ್ದಲ್ಲಿ ಇಂಥ ಬಡ್ಡಿಯಿಂದ ಲಾಭವಾಗದು. ಭೂಮಿ ಮುಂತಾದ ಸ್ಥಿರಾಸ್ತಿಗಳನ್ನು ಕೊಂಡರೆ ಅದರ ಬೆಲೆ ಹೆಚ್ಚುವುದೇನೋ ನಿಜ, ಆದರೆ ಇಲ್ಲಿ ನಗರ ಆಸ್ತಿ ಮಿತಿ ಕಾಯಿದೆ, ಅಕ್ರಮವಾಗಿ ಸ್ಥಳವನ್ನಾಕ್ರಮಿಸುವುದು, ಏರುವ ನಿರ್ವಹಣ ವೆಚ್ಚ ಮುಂತಾದ ತೊಂದರೆಗಳಿರುವುದಲ್ಲದೆ ಕಾಲಕಾಲಕ್ಕೆ ಅದರಿಂದ ಆದಾಯವೂ ಬಾರದು. ಚಿನ್ನ ಮತ್ತು ಬೆಳ್ಳಿಯಲ್ಲಿ ಹಣ ಹೂಡಿದರೆ ಈ ತೊಂದರೆಗಳಿಲ್ಲ ಎನ್ನಬಹುದು. ಆದರೆ ಸ್ವರ್ಣ ನಿಯಂತ್ರಣ ಅಧಿನಿಯಮದ ಪ್ರಕಾರ ಸಂಸ್ಥೆಯೊಂದು ಹೊಂದಿರಬಹುದಾದ ಚಿನ್ನ ಬೆಳ್ಳಿಯ ಪ್ರಮಾಣವನ್ನು ಮಿತಿಗೆ ಒಳಪಡಿಸಿದೆ ಎಂಬುದನ್ನು ಮರೆಯುವಂತಿಲ್ಲ. ಹೀಗಾಗಿ, ಲಾಭದಾಯಕವಾಗಿ ಹಣ ಹೂಡುವುದು ಕಂಪನಿಗಳಿಗೆ ಸುಲಭಸಾಧ್ಯವಲ್ಲ. ಇವೆಲ್ಲವನ್ನೂ ಯೋಚಿಸಲು ಬೇಕಾದ ವ್ಯವಧಾನ ಕಂಪನಿಗಳಿಗೆಲ್ಲಿ? ವಣಿಕ ಬ್ಯಾಂಕಿಂಗ್ ವಿಭಾಗದ ನೆರವು ಇಲ್ಲಿ ದೊರೆಯುತ್ತದೆ.

5 ಕಂಪನಿಗಳ ಆರ್ಥಿಕ ಸಂರಚನೆ (ಎಕನಾಮಿಕ್ ಸ್ಟ್ರಕ್ಚರ್), ಉದ್ದೇಶಿತ ಕಾರ್ಯನಿರ್ವಹಣೆಯ ಸಾಧ್ಯಾಸಾಧ್ಯತೆ, ಎರಡು ಅಥವಾ ಹೆಚ್ಚು ಕಂಪನಿಗಳನ್ನು ಒಗ್ಗೂಡಿಸುವುದರಲ್ಲಿರ

ಬಹುದಾದ ಲಾಭ-ನಷ್ಟ ಮುಂತಾದವುಗಳ ಬಗ್ಗೆ ವಣಿಕ ಬ್ಯಾಂಕಿಂಗ್ ವಿಭಾಗ ತಜ್ಞ ಸಲಹೆಗಳನ್ನು ನೀಡುತ್ತದೆ.

6 ಹೊಸ ಕೈಗಾರಿಕೋದ್ಯಮಿಗಳ ಯೋಜನೆಗಳಿಗೆ ಸಹಾಯ ನೀಡುವುದು. ಮಧ್ಯಮ ಅಥವಾ ದೊಡ್ಡ ಗಾತ್ರಕ್ಕೆ ಬೆಳೆಯುವ ಇಚ್ಛೆ ಸಣ್ಣ ಕೈಗಾರಿಕೆಗೆ ಇದ್ದಲ್ಲಿ ಅದಕ್ಕೆ ನೆರವಾಗುವುದು—ಇದೂ ಈ ವಿಭಾಗದ ಒಂದು ಚಟುವಟಿಕೆ.

7 ಕೈಗಾರಿಕಾ ಸಂಸ್ಥೆ ವಿಸ್ತರಿಸಲು, ಆಧುನೀಕರಣಗೊಳ್ಳಲು, ಮತ್ತು ಉತ್ಪನ್ನಗಳಲ್ಲಿ ವೈವಿಧ್ಯ ಸಾಧಿಸಲು (ಡೈವರ್ಸಿಫಿಕೇಷನ್) ಅನುಕೂಲವಾಗುವಂತೆ ಈ ವಿಭಾಗ ಸಲಹೆಗಳನ್ನೂ ನೆರವನ್ನೂ ನೀಡುತ್ತದೆ.

8 ಭಾರತದಲ್ಲಿ ಕೆಲಸಮಾಡುತ್ತಿರುವ ವಿದೇಶಿ ಕಂಪನಿಗಳು ತಮ್ಮ ವಿದೇಶಿ ಷೇರುಹಣದ ಪ್ರಮಾಣವನ್ನು ಮಿತಿಗೊಳಿಸಬೇಕೆಂದು ವಿದೇಶಿ ವಿನಿಮಯ ನಿಯಂತ್ರಣ ಅಧಿನಿಯಮ, 1973 (ಫಾರಿನ್ ಎಕ್ಸ್‌ಚೇಂಜ್ ರೆಗ್ಯುಲೇಷನ್ ಆಕ್ಟ್, 1973) ತಿಳಿಸುತ್ತದೆ. ಎರಡು ವರ್ಷಗಳೊಳಗೆ ವಿದೇಶಿ ಷೇರುಹಣದ ಮೊತ್ತವನ್ನು ಕಂಪನಿಯ ಒಟ್ಟು ಬಂಡವಾಳದ ಸೇ. 74ಕ್ಕೆ ಇಳಿಸಬೇಕೆಂದು ಭಾರತೀಯ ರಿಸರ್ವ್ ಬ್ಯಾಂಕು 1976ರಲ್ಲಿ ತಾಕೀತು ಮಾಡಿದಾಗ ಟೀ ಎಸ್ಟೇಟ್ಸ್(ಇಂಡಿಯ) ಲಿಮಿಟೆಡ್, ಕ್ಯಾಡ್‌ಬರಿ ಇಂಡಿಯ ಲಿಮಿಟೆಡ್, ಲಿಪ್ಟನ್ಸ್ ಮುಂತಾದ ಕಂಪನಿಗಳು ಇದಕ್ಕಾಗಿ ಬ್ಯಾಂಕುಗಳ ವಣಿಕ ಬ್ಯಾಂಕಿಂಗ್ ವಿಭಾಗದ ನೆರವು ಪಡೆದುವು. ಹೀಗೆ ಷೇರುಗಳನ್ನು ಭಾರತದಲ್ಲಿ ಸಾರ್ವಜನಿಕರಿಗೆ ಬಿಡುಗಡೆ ಮಾಡುವಾಗ ವಿದೇಶಿ ಕಂಪನಿಗಳ ಷೇರುಗಳ ಬೆಲೆಯನ್ನು ವೈಜ್ಞಾನಿಕವಾಗಿ ನಿರ್ಧರಿಸಲು ವಣಿಕ ಬ್ಯಾಂಕಿಂಗ್ ವಿಭಾಗ ಸಹಕರಿಸುತ್ತದೆ. ವಿದೇಶಿ ಕಂಪನಿಗಳ ಭಾರತೀಕರಣಕ್ಕೆ (ಇಂಡಿಯನೈಸೇಷನ್) ಅನುಸರಿಸಬೇಕಾದ ಕಾರ್ಯವಿಧಾನವನ್ನು ತಿಳಿಸಲು ಭಾರತೀಯ ಸ್ಟೇಟ್ ಬ್ಯಾಂಕಿನ ವಣಿಕ ಬ್ಯಾಂಕಿಂಗ್ ವಿಭಾಗ ತಜ್ಞರನ್ನು ಹೊಂದಿ ಸಜ್ಜಾಗಿದೆ.

## ಯೋಗ್ಯತೆ, ಪ್ರಯೋಜನ

ಭಾರತದಲ್ಲಿ ಇಂಥ ಸೇವೆ ನೀಡುತ್ತಿರುವವು ಕೆಲವೇ ಬ್ಯಾಂಕುಗಳು, ಅವುಗಳಲ್ಲಿ ಭಾರತೀಯ ಸ್ಟೇಟ್ ಬ್ಯಾಂಕ್ ಅಗ್ರಗಣ್ಯ. ಗ್ರಿಂಡ್ಲೇಸ್ ಬ್ಯಾಂಕ್, ಬ್ಯಾಂಕ್ ಆಫ್ ಇಂಡಿಯ ಮತ್ತಿತರ ಬ್ಯಾಂಕುಗಳೂ ವಣಿಕ ಬ್ಯಾಂಕಿಂಗ್ ವಿಭಾಗಗಳನ್ನು ಹೊಂದಿವೆ. ದೇಶದಲ್ಲಿ ಪ್ರತಿ ವರ್ಷ ನಡೆಯುವ ಷೇರುನೀಡಿಕೆಗಳಲ್ಲಿ ಬಹುಪಾಲು ವಣಿಕ ಬ್ಯಾಂಕಿಂಗ್ ವಿಭಾಗಗಳಿಂದಲೇ ನಿರ್ವಹಿಸಲ್ಪಡುತ್ತವೆ. ವಣಿಕ ಬ್ಯಾಂಕಿಂಗ್ ವಿಭಾಗದ ಸೇವೆ ಕೇಳಿದವರಿಗೆಲ್ಲ ಸಿಗುವುದಿಲ್ಲ. ಅದಕ್ಕೆ ಅರ್ಹತೆಯೂ ಬೇಕು. ಇಲ್ಲಿ ಪ್ರಮುಖ ಅರ್ಹತೆಯೆಂದರೆ ಕಂಪನಿಯ ಸ್ಥಾಪಕರ ನಿಷ್ಠೆ, ಮತ್ತು ಒಂದು ಕೈಗಾರಿಕೆಯನ್ನು ಸ್ಥಾಪಿಸಿ ಅದನ್ನು ಯಶಸ್ವಿಯಾಗಿ ನಡೆಸಲು ಅವರಲ್ಲಿ ಸಾಮರ್ಥ್ಯ.

ಮೇಲೆ ವಿವರಿಸಿದ ವಣಿಕ ಬ್ಯಾಂಕಿಂಗ್ ವಿಭಾಗದ ಚಟುವಟಿಕೆಗಳು ಮಾಮೂಲಿ ಬ್ಯಾಂಕಿಂಗ್‌ನಿಂದ ಭಿನ್ನವಾದುದೆಂಬುದು ಸ್ಪಷ್ಟವಾಗಿಯೇ ಇದೆ. ಬ್ಯಾಂಕುಗಳು ಇಂಥ ಚಟುವಟಿಕೆಗಳಿಗೆ ಕೈ ಹಾಕಬೇಕೇಕೆ? ಎಂಬ ಪ್ರಶ್ನೆ ಉದ್ಭವಿಸಬಹುದು. ಇಲ್ಲಿ ಬ್ಯಾಂಕುಗಳಿಗೆ ಹಲವಾರು ರೀತಿಯ ಪ್ರಯೋಜನಗಳಿವೆ. ಬ್ಯಾಂಕಿನ ಗ್ರಾಹಕ ವರ್ಗದಲ್ಲಿ ದೊಡ್ಡ ಕಂಪನಿಗಳಿಗೆ ವಿಶಿಷ್ಟ ಸ್ಥಾನವುಂಟು. ದೊಡ್ಡ ಕಂಪನಿಗಳ ಠೇವಣಿಗಳೂ ಅವುಗಳಿಗೆ ನೀಡಿದ ಸಾಲಗಳೂ ಬ್ಯಾಂಕಿನ ಒಟ್ಟು ವ್ಯವಹಾರದಲ್ಲಿ ಗಣನೀಯ ಪ್ರಮಾಣದವಾಗಿರುತ್ತದೆ. ಇಂಥ ಕಂಪನಿಗಳಿಗೂ, ಬ್ಯಾಂಕಿಗೂ ನಿಕಟ ಸಂಬಂಧ ಏರ್ಪಡುತ್ತದೆ. ಕಂಪನಿ ಹೊಸದಾದರೆ ಅದರ ವ್ಯವಹಾರವನ್ನು ಬ್ಯಾಂಕು ಆಕರ್ಷಿಸಬಹುದು; ಹಳೆಯದಾದರೆ ಇರುವ ವ್ಯವಹಾರವನ್ನು ಭದ್ರವಾಗಿ ಉಳಿಸಿಕೊಳ್ಳಬಹುದು.

ಹೆಚ್ಚಿನ ವಿದೇಶಿ ವ್ಯವಹಾರದಿಂದ ಅಧಿಕ ವಿನಿಮಯಗಳಿಕೆ, ಹುಂಡಿ ವ್ಯವಹಾರದಿಂದ ಅಧಿಕ ವಟ್ಟ, ಇವೂ ಸಹ ಬ್ಯಾಂಕಿನ ಲಾಭದ ಬುಟ್ಟಿಗೇ ಬೀಳುತ್ತದೆ.

ಮೇಲೆ ಚರ್ಚಿಸಿದ ಸೇವೆಗಳನ್ನು ವಣಿಕ ಬ್ಯಾಂಕಿಂಗ್ ವಿಭಾಗ ಪುಕ್ಕಟೆಯಾಗಿ ಸಲ್ಲಿಸುವುದಿಲ್ಲ! ಎಲ್ಲ ಸೇವೆಗಳಿಗೂ ವಿಭಾಗ ಸೂಕ್ತ ಶುಲ್ಕವನ್ನು ಪಡೆಯುತ್ತದೆ. ಎಷ್ಟೆಂದರೂ ಕೆಲಸ ಕಂಪೆನಿಯದು ತಾನೆ? ಅದರ ಹೊಣೆ ಹೊತ್ತ ಬ್ಯಾಂಕು ಖರ್ಚುಗಳನ್ನೆಲ್ಲ ತೆರಬೇಕೆಂದರೆ ಹೇಗೆ? ಆದ್ದರಿಂದ ಈ ವ್ಯವಹಾರದಲ್ಲಿ ಬ್ಯಾಂಕಿಗೆ ತಗಲುವ ಸಂಪೂರ್ಣ ಖರ್ಚನ್ನೇ ಅಲ್ಲದೆ ವಿಭಾಗದ ವಿವಿಧ ಸೇವೆಗಳಿಗೆ ನಿಯಮಿತವಾದ ಶುಲ್ಕವನ್ನು ಕಂಪನಿಗಳು ನೀಡುತ್ತವೆ. ಈ ಹಣವೂ ಗಣನೀಯ ಪ್ರಮಾಣದಲ್ಲಿ ಬ್ಯಾಂಕಿನ ಲಾಭಕ್ಕೆ ಸೇರಿಕೊಳ್ಳುತ್ತದೆ.

ವಣಿಕ ಬ್ಯಾಂಕಿಂಗ್ ವಿಭಾಗ ಪರಾವಲಂಬಿಯಲ್ಲ; ಬ್ಯಾಂಕಿಗೆ ಲಾಭ ತರುವ ವಿಭಾಗ.

THE KARNATAKA STATE CO-OPERATIVE

# APEX BANK LIMITED

( A SCHEDULED BANK )

*Head Office :* **BANGALORE-560 018**

**With the PUBLIC Support we financed Rs. 52 Crores to Agriculture Sector during 1979-80**

**The Working Capital of our Bank was Rs. 91.01 Crores in 1980**

*¼% more interest than other Banks has helped the Farmers in addition to bulging your Account. Join in the National effort by having a Deposit with APEX BANK*

*Contact any one of our* **25** *Branches*

Our interest rate structure varies from

2¾% to 10¼% ... on Term Deposits
5¼% ... on Savings Bank Deposits

**Many other schemes of Deposits**

*Let us March together for the*
**PROSPERITY** *of the* **NATION**

**G. L. Nalluregowda**
*President*

**V. Bandeppa**
*Vice-President*

**M. K. Venkatarame Gowda**
*Managing Director*

ನ್ಯಾಯಾಲಯದಲ್ಲಿ

# ಹಿಂದೂಸ್ತಾನ್ ಕಮರ್ಷಿಯಲ್ ಕಾರ್ಪೊರೇಷನ್ ಪಾರಾದ ಪ್ರಸಂಗ

**ಕೆ. ಪಿ. ರಾವ್**

ಈ ಪ್ರಕರಣ ನಡೆದು ಸುಮಾರು ಮೂರು ದಶಕಗಳೇ ಸಂದಿವೆ. ಅಂದರೆ ಇದು 1951ರ ಮೇ ತಿಂಗಳಲ್ಲಿ ನಡೆಯಿತು. ಆದರೆ ಪ್ರಕರಣದ ಬಗ್ಗೆ ಕಲ್ಕತ್ತ ಹೈಕೋರ್ಟಿನ ಅಂತಿಮ ತೀರ್ಮಾನ ಹೊರಬಂದಿದ್ದು 1979ರಲ್ಲಿ, 28 ವರ್ಷಗಳ ತರುವಾಯ.

ಕಲ್ಕತ್ತೆಯ ಹಿಂದೂಸ್ತಾನ್ ಬ್ಯಾಂಕಿಂಗ್ ಕಾರ್ಪೊರೇಷನ್ ಸಂಸ್ಥೆ ಅಜಾಗರೂಕತೆ ಮತ್ತು ಅಲಕ್ಷ್ಯಗಳ ಆರೋಪಕ್ಕೆ ಗುರಿಯಾಗಿದ್ದು, ಗ್ರಾಹಕರೊಬ್ಬರಿಗೆ ಸುಮಾರು 69 ಸಾವಿರ ರೂಪಾಯಿ ಪರಿಹಾರ ಕೊಡಬೇಕಾದ ಈ ಮೊಕದ್ದಮೆಯಲ್ಲಿ ಗ್ರಾಹಕರ ಬಗ್ಗೆ ಬ್ಯಾಂಕುಗಳು ವಹಿಸಬೇಕಾದ ಎಚ್ಚರಿಕೆಯ ಮಿತಿ ಎಷ್ಟು ಎಂಬುದನ್ನು ಕಲ್ಕತ್ತ ಹೈಕೋರ್ಟು ಪರಿಶೀಲಿಸಿದೆ.

ಮಿತ್ತರ್ ಎಂಬವರು ಕಲ್ಕತ್ತೆಯಲ್ಲಿ ಷೇರು ವ್ಯಾಪಾರ ನಡೆಸುತ್ತಿದ್ದರು. ಅವರ ಸಂಸ್ಥೆಯ ಹೆಸರು ಕೃಷ್ಣ ಮತ್ತು ಕಂಪನಿ. 10–5–1951ರ ಸುಮಾರಿನಲ್ಲಿ ಘೋಷ್ ಎಂಬಾತ ಮಿತ್ತರ್ ಬಳಿ ಬಂದು ಬೇರೆ ಬೇರೆ ಕಂಪನಿಗಳ ಷೇರುಗಳನ್ನು ಮಾರಾಟ ಮಾಡುವುದಾಗಿ ಹೇಳಿದ. ಅದೇ ಪ್ರಕಾರ ಷೇರುಗಳ ಮಾರಾಟಕ್ಕಾಗಿ ಬಾಯಿಮಾತಿನ ಒಪ್ಪಂದವಾಯಿತು. ಷೇರುಗಳನ್ನು ಹಿಂದೂಸ್ತಾನ್ ಕಮರ್ಷಿಯಲ್ ಕಾರ್ಪೊರೇಷನ್ ಎಂಬ ಬ್ಯಾಂಕಿನ ಮೂಲಕ ಮಾರಾಟ ಮಾಡುವುದಾಗಿಯೂ ಅವುಗಳ ಬೆಲೆಯನ್ನು ಪಾವತಿ ಮಾಡಿ, ಬ್ಯಾಂಕಿನ ಮೂಲಕ ಷೇರು ಪತ್ರಗಳನ್ನು ಪಡೆಯಬಹುದೆಂದೂ ಘೋಷ್ ಸೂಚಿಸಿದ.

ಹಿಂದೂಸ್ತಾನ್ ಕಮರ್ಷಿಯಲ್ ಕಾರ್ಪೊರೇಷನ್ನಿನಲ್ಲಿ ಘೋಷ್ ತನ್ನ ಲೆಕ್ಕದ ಖಾತೆಯನ್ನು ತೆರೆದುದೇ ಅಲ್ಲದೆ ಷೇರುಪತ್ರಗಳನ್ನೂ ಒಪ್ಪಿಸಿದ. ಅನಂತರ ಬ್ಯಾಂಕು ಮಿತ್ತರರಿಗೆ ಬಿಲ್ಲುಗಳನ್ನು ಕಳುಹಿಸಿ ಹಣ ಪಾವತಿ ಮಾಡಿ ಷೇರುಗಳನ್ನು ತೆಗೆದುಕೊಂಡು ಹೋಗಬಹುದೆಂದು ಸೂಚಿಸಿತು. 1951ರ ಮೇ 13ನೆಯ ತಾರೀಕಿನಿಂದ ಜೂನ್ 7ನೆಯ ತಾರೀಕಿನ ವರೆಗಿನ ಅವಧಿಯಲ್ಲಿ ಮಿತ್ತರ್ ಬ್ಯಾಂಕಿಗೆ ಹಣ ಪಾವತಿ ಮಾಡಿ ಷೇರುಪತ್ರಗಳನ್ನು ಪಡೆದರು.

ಆದರೆ ಅವರ ಈ ವ್ಯವಹಾರ ಸುಗಮವಾಗಲಿಲ್ಲ. ಜೂನ್-ಜುಲೈ ತಿಂಗಳಲ್ಲಿ ಪೋಲೀಸರು ಬಂದು ದಾಳಿ ಮಾಡಿ ಷೇರುಪತ್ರಗಳನ್ನು ಮಿತ್ತರರಿಂದ ವಶಪಡಿಸಿಕೊಂಡರು. ಅವು ಕಳವು ಮಾಲೆಂದು ಆಪಾದಿಸಿದರು ಮತ್ತು ಅವನ್ನು ಮಾರಿದ ಘೋಷ್ ವಿರುದ್ಧ ಕಳವಿನ ಆಪಾದನೆಯ ಮೇಲೆ ಮೊಕದ್ದಮೆ ಹೂಡಿದರು. ಘೋಷ್ ದೋಷಿಯೆಂದು ನಿರ್ಣಯವಾಯಿತು. ಮತ್ತು ಅವನಿಗೆ ಶಿಕ್ಷೆಯೂ ಆಯಿತು.

ಈ ಕಳವು ಷೇರುಗಳನ್ನು ಕೊಂಡ ಮಿತ್ತರ್ ಹಣವನ್ನು ಕಳೆದುಕೊಳ್ಳುವ ಸ್ಥಿತಿಯುಂಟಾಯಿತು.

### ಮಿತ್ತರ್ ದಾವೆ

ಆದರೆ ಮಿತ್ತರ್ ನಿರಾಶೆಗೊಳ್ಳಲಿಲ್ಲ. ಷೇರುಪತ್ರಗಳನ್ನು ಕೊಟ್ಟಿದ್ದು ಹಿಂದೂಸ್ತಾನ್ ಬ್ಯಾಂಕಲ್ಲವೇ? ಅದು ಕಳವು ಮಾಲನ್ನು ಹೇಗೆ ಹಸ್ತಾಂತರ ಮಾಡಿತು? ಷೇರುಪತ್ರಗಳು ಹೇಗೆ ಬಂದುವೆಂಬುದನ್ನು ತನ್ನ ಗ್ರಾಹಕ ಘೋಷನಿಂದ ತಿಳಿದುಕೊಳ್ಳಲಿಲ್ಲವೇಕೆ? ಈ ರೀತಿ ಅಲಕ್ಷ್ಯದಿಂದಾಗಿ ಕೊಂಡವರನ್ನು ನಷ್ಟಕ್ಕೆ ಗುರಿಪಡಿಸಬಹುದೆ? ಮತ್ತೆ ಬ್ಯಾಂಕಿನ ಮೂಲಕ ಪಡೆದ ಮಾಲಿನ ಬಗ್ಗೆ ಸಂಪೂರ್ಣ ಖಾತರಿಯ ಜವಾಬ್ದಾರಿ ಬ್ಯಾಂಕಿಗೇ ಸೇರಿದ್ದಲ್ಲವೆ? ಎಂದು ಮುಂತಾಗಿ

ಆಲೋಚಿಸಿ, ತಮಗಾದ ನಷ್ಟವನ್ನು ಕಟ್ಟಿಕೊಟ್ಟು ಷೇರುಗಳ ಬೆಲೆಯನ್ನು ವಾಪಸು ಕೊಡಬೇಕೆಂದು ಮಿತ್ತರ್ ಬ್ಯಾಂಕಿನ ವಿರುದ್ಧ ದಾವಾ ಹೂಡಿದರು.

ವಿಚಾರಣಾ ನ್ಯಾಯಾಲಯು ಮಿತ್ತರರ ವಾದವನ್ನು ಎತ್ತಿ ಹಿಡಿಯಿತು. ಷೇರುಗಳನ್ನು ಹಸ್ತಾಂತರ ಮಾಡುವಾಗ ಆ ಬ್ಯಾಂಕು ತನ್ನದೇ ಆದ ಬಿಲ್ಲುಗಳನ್ನು ಸಿದ್ಧಪಡಿಸಿತ್ತು, ಹಣವನ್ನು ಪಡೆದಿತ್ತು. ಹಾಗೂ ಷೇರುಪತ್ರಗಳನ್ನು ತಾನೇ ಖುದ್ದಾಗಿ ಮಿತ್ತರ್‌ಗೆ ನೀಡಿತ್ತು. ಈ ರೀತಿಯಾಗಿ ಪಾತ್ರ ನಿರ್ವಹಿಸುವ ಮೂಲಕ ಷೇರುಗಳು ಯಾವುದೇ ರೀತಿಯ ದೋಷಕ್ಕೆ ಒಳಗಾಗಿಲ್ಲವೆಂಬ ಖಾತರಿಯನ್ನು ಬ್ಯಾಂಕು ನೀಡಿದೆ. ಮತ್ತು ಷೇರುಗಳ ಮಾಲೀಕತ್ವದ ಬಗ್ಗೆ ಯಾವುದೇ ಕಳಂಕವಿಲ್ಲ ಮತ್ತು ಹಣ ತೆತ್ತು ಅವನ್ನು ಪಡೆದ ಮಿತ್ತರ್ ಮಾಲೀಕರಾಗುತ್ತಾರೆ ಮತ್ತು ಅಬಾಧಿತರಾಗಿ ಅನುಭವಿಸಲು ಅಧಿಕಾರ ಹೊಂದಿರುತ್ತಾರೆ ಎಂಬ ಖಾತರಿ ಮತ್ತು ಆಶ್ವಾಸನೆಯನ್ನು ನೀಡುತ್ತದೆ. ಬ್ಯಾಂಕಿನ ವರ್ತನೆಯಿಂದ ಘೋಷರೇ ನಿಜವಾದ ಮಾಲೀಕರೆಂದೂ ಮಿತ್ತರ್ ಗ್ರಹಿಸಲು ಅವಕಾಶವಾಗಿದೆ. ಆದುದರಿಂದ ಮಿತ್ತರ್‌ಗೆ ಬ್ಯಾಂಕು ಹೊಣೆಯಾಗಿರುತ್ತದೆ. ಹಣವನ್ನು ಪಡೆದು ಷೇರು ಪತ್ರಗಳನ್ನು ನೀಡಿರುವುದರಿಂದ ಬ್ಯಾಂಕೇ ತನಗೆ ಜವಾಬ್ದಾರಿಯಾಗಬೇಕು ಎಂದೂ ಮಿತ್ತರ್ ವಾದಿಸಿದರು.

ಅದೇ ಪ್ರಕಾರ ಮಿತ್ತರ್‌ಗೆ ರೂ. 68.598 ಕೊಡಬೇಕೆಂದು ಬ್ಯಾಂಕಿನ ವಿರುದ್ಧ ಆಜ್ಞೆಯನ್ನು ಕೋರ್ಟು ನೀಡಿತು.

ಘೋಷ್ ಷೇರು ಪತ್ರಗಳನ್ನು ಹಾಜರುಪಡಿಸಿದಾಗ ಅವು ಯಾರಿಗೆ ಸೇರಿದ್ದು, ಯಾವ ರೀತಿ ಅವರಿಗೆ ಬಂತು, ಅದರ ನಿಜವಾದ ಮಾಲೀಕ ಯಾರು ಎಂಬ ಬಗ್ಗೆ ಯಾವುದೇ ರೀತಿಯ ವಿಚಾರಣೆ ಮಾಡದೆ ಬ್ಯಾಂಕು ಅಲಕ್ಷ್ಯದಿಂದ ವರ್ತಿಸಿದೆ. ಈ ಅಲಕ್ಷ್ಯದಿಂದ ಮಿತ್ತರ್ ನಷ್ಟಕ್ಕೀಡಾಗಿದ್ದಾರೆ. ಈ ಜವಾಬ್ದಾರಿಯನ್ನು ಬ್ಯಾಂಕೇ ವಹಿಸಬೇಕು ಎಂದು ತೀರ್ಮಾನಿಸಿತು. ತನ್ನ ಗ್ರಾಹಕರ ದುರ್ವರ್ತನೆಗೆ ಬ್ಯಾಂಕೂ ಜವಾಬ್ದಾರಿ ವಹಿಸಬೇಕು ಎಂದೂ ಅದು ಅಭಿಪ್ರಾಯಪಟ್ಟಿತು.

ಈ ಡಿಕ್ರಿಯ ವಿರುದ್ಧ ಬ್ಯಾಂಕು ಕಲ್ಕತ್ತ ಹೈಕೋರ್ಟಿಗೆ ಅಪೀಲು ಸಲ್ಲಿಸಿತು.

## ಅಪೀಲು

ಕಲ್ಕತ್ತ ಹೈಕೋರ್ಟಿನ ನ್ಯಾಯಮೂರ್ತಿಗಳಾದ ರಮೇಂದ್ರ ಮೋಹನ ದತ್ತ ಮತ್ತು ಹಾಜ್ರಾ ಅವರು ಈ ಅಪೀಲನ್ನು ಅಂಗೀಕರಿಸಿ ಬ್ಯಾಂಕನ್ನು ವಿಮುಕ್ತಿಗೊಳಿಸಿದರು. ಈ ವ್ಯವಹಾರ ದಲ್ಲಿ ಬ್ಯಾಂಕು ನಿರ್ವಹಿಸಿದ ಪಾತ್ರವೇನು ಮತ್ತು ಅದರ ಜವಾಬ್ದಾರಿಯೇನು ಎಂಬುದನ್ನು ಕೋರ್ಟು ದೀರ್ಘವಾ ಪರಿಶೀಲಿಸಿದೆ.

ಷೇರು ಪತ್ರಗಳ ಹಸ್ತಾಂತರದಲ್ಲಿ ಬ್ಯಾಂಕಿನ ಪಾತ್ರ ಸೀಮಿ ವಾದದ್ದು. ಷೇರುಪತ್ರಗಳು ಯಾರಿಗೆ ಸೇರಿದವು? ಅವುಗ ಮಾಲೀಕರು ಯಾರು? ತನ್ನ ಗ್ರಾಹಕರಾದ ಶ್ರೀ ಘೋಷ ಅವರೇ ಷೇರುಗಳ ನಿಜವಾದ ಮಾಲೀಕರು ಎಂಬ ಬ ಖಚಿತಪಡಿಸಿಕೊಂಡ ಅನಂತರ ಮಾತ್ರ ಅವನ್ನು ಮಿತ್ತರ ಅವರಿಗೆ ಕೊಡಬೇಕಾಗಿದ್ದಿತು ಎಂಬ ಕರ್ತವ್ಯದ ಹೊಣೆಯ ಬ್ಯಾಂಕಿನ ಮೇಲೆ ಇತ್ತು ಎಂಬ ಅಂಶ ಖಟ್ಲೆಯ ಸಂಗತಿಗಳಿಂ ವ್ಯಕ್ತವಾಗುವುದಿಲ್ಲ. ಈ ವ್ಯವಹಾರದಲ್ಲಿ ಬ್ಯಾಂಕು ತ ಗ್ರಾಹಕರಾದ ಶ್ರೀ ಘೋಷರ ಅಭಿಕರ್ತೃವಾಗಿ (ಏಜೆಂಟ್ ಮಾತ್ರ ವರ್ತಿಸಿದೆ. ಮತ್ತು ಗ್ರಾಹಕ ನೀಡಿದ ಸೂಚನೆಯನ ಮಾತ್ರ ಕಾರ್ಯಗತ ಮಾಡಿದೆಯೇ ಹೊರತು ತನ್ನ ಸ್ವಂ ಜವಾಬ್ದಾರಿಯ ಮೇಲೆ ಯಾವುದೇ ವ್ಯವಹಾರವನ ಮಾಡಿರುವುದಿಲ್ಲ. ಷೇರುಪತ್ರಗಳನ್ನು ಹಸ್ತಾಂತರ ಮಾಡಿ ಮಾತ್ರಕ್ಕೆ ಅದರ ಮಾಲೀಕತ್ವದ ಬಗ್ಗೆ ಬ್ಯಾಂಕು ಖಾತ ನೀಡಿದೆ ಎಂದು ಮಿತ್ತರ್ ಮಾಡಿರುವ ವಾದ ಸಮಥ ನೀಯವಲ್ಲ. ಈ ವ್ಯವಹಾರದಲ್ಲಿ ಬ್ಯಾಂಕು ಕೇವಲ ಒಂ ವಾಹಕವಾಗಿ ವರ್ತಿಸಿದೆಯೇ ವಿನಾ ಅದರ ಸ್ವಂತ ಪಾ ವೇನೂ ಇರಲಿಲ್ಲ. ಆದುದರಿಂದ ಷೇರುಪತ್ರಗಳು ಕಳ ಮಾಲಾಗಿದ್ದು ಅದರಿಂದ ಮಿತ್ತರ್ ಅವರು ಅನುಭವಿ ಬಹುದಾದ ನಷ್ಟಕ್ಕೆ ಬ್ಯಾಂಕು ಹೊಣೆಯಲ್ಲವೆಂದು ಅ ಪ್ರಾಯಪಟ್ಟು ಮಿತ್ತರರ ದಾವೆಯನ್ನು ನ್ಯಾಯಮೂ ಗಳು ವಜಾ ಮಾಡಿದರು.

ಅಂತೂ ಇಂತೂ ಹಿಂದೂಸ್ಥಾನ್ ಕಮರ್ಷಿಯ ಕಾರ್ಪೊರೇಷನ್ ಪಾರಾಯಿತು. ಮಿತ್ತರ್ ಅವರ ನ ಖಾಯಂ ಆಯಿತು.

---

ಶ್ರೀ ಎ. ಡಬ್ಲ್ಯು. ಕ್ಲಾಜನ್‌ರವರು ವಿಶ್ವಬ್ಯಾಂಕಿನ ನೂತನ ಅಧ್ಯಕ್ಷರಾಗಿ ಜುಲೈ ಒಂದರಿಂದ ಅಧಿಕಾರ ವಹಿಸಿಕೊಂಡಿದ್ದಾರೆ.

---

# ಬ್ಯಾಂಕುಗಳಲ್ಲಿ ಉತ್ಪಾದಕತೆ

ಎನ್. ಪಿ. ಕುವರ್‌ಜೀ

## ಬ್ಯಾಂಕುಗಳ ಉತ್ಪಾದಕತೆಯಲ್ಲಿ ಕಳೆದ ಹದಿನೈದು ವರ್ಷಗಳಲ್ಲಿ ಆಗಿರುವ ಬದಲಾವಣೆಗಳ ವಿವೇಚನೆ

ಉತ್ಪಾದಕತೆ ಎಂದರೆ, ಅತ್ಯಂತ ವಿಶಾಲ ಅರ್ಥದಲ್ಲಿ, ಸರಕು ಮತ್ತು ಸೇವೆಗಳಿಗೂ ಅವನ್ನು ಉತ್ಪಾದಿಸಲು ತೊಡಗಿಸಿದ ಆಕರಗಳಿಗೂ ಇರುವ ಸಂಬಂಧ—ಎಂದರೆ ಉತ್ಪನ್ನಕ್ಕೂ ಅದರ ನಿವೇಶಕ್ಕೂ (ಇನ್‌ಪುಟ್) ಇರುವ ಅನುಪಾತ. ಸೇವಾ ಉದ್ಯಮ (ಸರ್ವಿಸ್ ಇಂಡಸ್ಟ್ರಿ) ಎಂದು ವರ್ಗೀಕೃತವಾದ ಬ್ಯಾಂಕಿಂಗಿಗೆ ಇದನ್ನು ಅನ್ವಯಿಸುವುದು ಕಷ್ಟ. ತಯಾರಿಕಾ ಕೈಗಾರಿಕೆಯಂತೆ ಬ್ಯಾಂಕಿಂಗ್ ಉದ್ಯಮದಲ್ಲಿ ಉತ್ಪನ್ನವನ್ನು ಅಳೆಯಲಾಗುವುದಿಲ್ಲ. ಶಾಖೆಯಿಂದ ಶಾಖೆಗೆ ಪರಿಸರ ಮತ್ತು ವ್ಯವಹಾರ ಬದಲಾಗುವುದರಿಂದ, ಉತ್ಪಾದಕತೆಯ ಮಾನದಂಡಗಳನ್ನು ಅನ್ವಯಿಸಲು ಕಷ್ಟವಾಗುತ್ತದೆ. ಬೇರೆ ಬೇರೆ ಉದ್ಯಮಗಳಿಗೆ ಉತ್ಪಾದಕತೆಯ ಮಾನದಂಡಗಳೂ ಉತ್ಪಾದಕತೆಯ ಪರಿಮಾಣಗಳೂ ಬೇರೆಯಾಗಿರುವುದರಿಂದ ಬ್ಯಾಂಕುಗಳು ಉತ್ಪಾದಕತೆಯ ಬಗ್ಗೆ ಏಕಿಷ್ಟು ಕಾಳಜಿ ವಹಿಸಬೇಕು? ಏಕೆಂದರೆ ಕಳೆದ 15 ವರ್ಷಗಳಿಂದ ಬ್ಯಾಂಕುಗಳ ಲಾಭಗಳಿಕೆ ಕಡಿಮೆಯಾಗುತ್ತಿದೆ. ಇದಕ್ಕೆ ಕಾರಣ ಇಳಿಮುಖವಾಗುತ್ತಿರುವ ಉತ್ಪಾದಕತೆ.

ಹದಿನೈದು ವರ್ಷಗಳ ಅವಧಿಯನ್ನು ಮೂರು ಸ್ಪಷ್ಟ ಹಂತಗಳಾಗಿ ವಿಂಗಡಿಸಬಹುದು. ಮೊದಲನೆಯದಾಗಿ 1964 ರಿಂದ 1969ರ ವರೆಗಿನ, ರಾಷ್ಟ್ರೀಕರಣ ಪೂರ್ವದ, ಹಂತ. ಎರಡನೆಯದಾಗಿ 1970–75ರ ಅವಧಿಯಲ್ಲಿ ಬ್ಯಾಂಕುಗಳು ಸಾಮಾಜಿಕ ಹೊಣೆಯನ್ನು—ಸರ್ಕಾರದಿಂದ ಆದೇಶಿತವಾದುದು—ನಿರ್ವಹಿಸುವುದರಲ್ಲಿ, ಮಹತ್ವದ ಪಾತ್ರವನ್ನು ವಹಿಸಿದುವು. ಜವಾಬ್ದಾರಿಗಿಂತ ಶಾಖಾ ವಿಸ್ತರಣ ಹೆಚ್ಚಾದುದರಿಂದ ಲಾಭದ ಗಳಿಕೆ ಮತ್ತಷ್ಟು ಕಡಿಮೆಯಾಯಿತು. ಮೂರನೆಯದಾಗಿ 1976ರಿಂದ 1978ರ ವರೆಗಿನ ಅವಧಿಯಲ್ಲಿ ಶಾಖಾ ವಿಸ್ತರಣ ಕಡಿಮೆಯಾದುದು ಲಾಭ ಮತ್ತಷ್ಟು ಕಡಿಮೆಯಾಗಲು ಪ್ರಮುಖ ಕಾರಣವಾಯಿತು. ಕೆಲವು ತಜ್ಞರ ಈ ವಿವರಣೆಯಿಂದ ಹೊಮ್ಮುವ ವಿಷಯವೆಂದರೆ, ಪ್ರತಿಯೊಂದು ಹಂತದಲ್ಲೂ ಲಾಭಗಳಿಕೆಯಲ್ಲಿ ಆದ ಇಳಿತಾಯಕ್ಕೆ ಹಣಸಂಬಂಧವಾದ ಮತ್ತು ಹಣಸಂಬಂಧಿಯಲ್ಲದ ಅಂಶಗಳು ಕಾರಣಗಳಾಗಿವೆ. ಅವಕ್ಕೂ ಕಾರ್ಮಿಕ ಉತ್ಪಾದಕತೆಗೂ ಸಂಬಂಧವಿಲ್ಲ. ಕೆಲವರು ಆಪಾದಿಸುವಂತೆ ಕಾರ್ಮಿಕ ಉತ್ಪಾದಕತೆಯಲ್ಲಾದ ಇಳಿತವೇ ಬ್ಯಾಂಕುಗಳ ಲಾಭದ ಇಳಿತಕ್ಕೆ ಏಕಮಾತ್ರ ಕಾರಣವಲ್ಲ. ಅಂದರೆ ಕಾರ್ಮಿಕ ಉತ್ಪಾದಕತೆಯನ್ನು ಕಡೆಗಣಿಸಲೇಬೇಕೆಂಬುದು ಅಭಿಪ್ರಾಯವಲ್ಲ. ಅದನ್ನು ಹೆಚ್ಚಿಸಿ ಲಾಭವನ್ನು ಹೆಚ್ಚಿಸಬೇಕು ಮತ್ತು ಗ್ರಾಹಕರ ಸೇವೆಯನ್ನು ಉತ್ತಮಪಡಿಸಬೇಕು ಎಂಬುದರಲ್ಲಿ ಸಂದೇಹವಿಲ್ಲ.

### ಕಾರ್ಮಿಕ ಉತ್ಪಾದಕತೆ

ಲಾಭಗಳಿಕೆಯನ್ನು ಹೆಚ್ಚಿಸಬೇಕಾದರೆ ಉತ್ಪಾದಕತೆಯನ್ನು ಹೆಚ್ಚಿಸಬೇಕು. ಬೆಳವಣಿಗೆಯ ದರವನ್ನು, ಅದು ಮುಟ್ಟಿರುವ ಮಟ್ಟವನ್ನು ಹಾಗೂ ಸೂಕ್ಷ್ಮವಾದ ಸಮಸ್ಯೆಗಳನ್ನು ಉತ್ಪಾದಕತೆಯ ಮಾಪನದಿಂದ ಅರಿಯಬಹುದು. ಪರಿಸ್ಥಿತಿಯ ಸುಧಾರಣೆಗೆ ಅನುಸರಿಸಬೇಕಾದ ಉಪಾಯವೂ ಗೊತ್ತಾಗುತ್ತದೆ. ಸಮಸ್ಯೆಗಳತ್ತ ಗಮನ ಸೆಳೆದು ಅವುಗಳ ಸುಧಾರಣೆಗೆ ಅನುಸರಿಸಬಹುದಾದ ಉಪಾಯಗಳನ್ನು ಉತ್ಪಾದಕತೆಯ ಮಾಪನದಿಂದ ಅರಿಯಬಹುದು. ಬಹಳ ಜನಪ್ರಿಯವಾದ ಮಾಪನ ವಿಧಾನವೆಂದರೆ ಕಾರ್ಮಿಕ ಉತ್ಪಾದಕತೆಯನ್ನು ಅಳೆಯುವ ವಿಧಾನ. ಕಾರ್ಮಿಕ ಉತ್ಪಾದನೆಗೂ ಇದಕ್ಕೆ ಉಪಯೋಗಿಸಲಾದ ಕಾರ್ಮಿಕ ಶಕ್ತಿಗೂ ಇರುವ ಅನುಪಾತವೇ ಕಾರ್ಮಿಕ ಉತ್ಪಾದಕತೆ. ಇದನ್ನು ಕಾಲದ ಮಿತಿಯಲ್ಲಿ ಅಳೆಯಲಾಗುವುದು. ಇತ್ತೀಚಿನ ದಿನಗಳಲ್ಲಿ ಬ್ಯಾಂಕುಗಳಲ್ಲಿ ಒಬ್ಬೊಬ್ಬ ನೌಕರನ ಉತ್ಪಾದಕತೆಯನ್ನೂ ಠೇವಣಿ ಹಾಗೂ ಸಾಲಕ್ಕೂ ಇರುವ ಸಂಬಂಧ, ಪ್ರತಿಯೊಬ್ಬ ನೌಕರನಿಗೆ ತಗಲುವ ವೆಚ್ಚ

ಮೊದಲಾದ ಅನುಪಾತಗಳ ದೃಷ್ಟಿಯಿಂದ ಲೆಕ್ಕ ಮಾಡುತ್ತಾರೆ. ಈ ಅನುಪಾತಗಳು ಎಷ್ಟೇ ನಿಷ್ಕೃಷ್ಟವಾಗಿದ್ದರೂ, ಇವು ಕಾರ್ಮಿಕ ಉತ್ಪಾದಕತೆಯನ್ನು ಅಳೆಯಲು ಬಳಸುವ ಸೂಕ್ತ ಮಾನದಂಡಗಳಾಗಲಾರವು.

ಶಾಖೆಯ ವಯಸ್ಸು, ಅದರ ಸನ್ನಿವೇಶ ಆ ಪ್ರದೇಶದಲ್ಲಿಯ ಆರ್ಥಿಕ ಚಟುವಟಿಕೆ ಇವುಗಳಿಂದ ಆ ಶಾಖೆಯ ಠೇವಣಿಗಳ ಮೊತ್ತ ಮತ್ತು ಸಾಲಗಳ ಮಟ್ಟ ಪ್ರಭಾವಿತವಾಗುತ್ತವೆ. ಆದ್ದರಿಂದ ಬೇರೆ ಬೇರೆ ಪರಿಸರಗಳಲ್ಲಿ ಕೆಲಸ ಮಾಡುತ್ತಿರುವ ಶಾಖೆಗಳಿಗೆ ಬಿಡಿಬಿಡಿಯಾಗಿ ಮಾನದಂಡಗಳನ್ನು ಗೊತ್ತುಪಡಿಸಲಾಗುವುದಿಲ್ಲ.

ಉತ್ಪಾದಕತೆಯನ್ನು ಹೆಚ್ಚಿಸುವುದೂ ಮಾನದಂಡಗಳನ್ನು ಗೊತ್ತುಪಡಿಸುವುದೂ ಕಷ್ಟವಾದರೂ, ಉತ್ಪಾದಕತೆಯು ಬೇರೊಂದು ಮುಖವನ್ನು ಬಳಸಿಕೊಳ್ಳಬಹುದು. ಸಿಬ್ಬಂದಿಗೆ ಅವರ ಪ್ರತಿಭೆಗೆ ತಕ್ಕ ಕೆಲಸಗಳನ್ನು ಕೊಡುವುದರ ಮೂಲಕ ಯುಕ್ತವಾದ ಜವಾಬ್ದಾರಿಯನ್ನು ವಹಿಸಿಕೊಂಡು, ಅವರ ಶಕ್ತಿ ಪೂರ್ಣವಾಗಿ ಕೆಲಸ ಮಾಡುವಂತೆ ಪ್ರೇರಿಸುವುದರಿಂದ ಉತ್ಪಾದಕತೆಯನ್ನು ಹೆಚ್ಚಿಸಬಹುದು. ಉತ್ಪಾದಕತೆ ಎಂಬುದು ಒಂದು ನಿಷ್ಕೃಷ್ಟ ಪರಿಕಲ್ಪನೆಯಾದ್ದರಿಂದ ಸಿಬ್ಬಂದಿಯನ್ನು ಅವರು ಉತ್ಪಾದಕತೆಗೆ ಭಾಧ್ಯರಾಗಿರುವಂತೆ ಮಾಡುವುದು, ಅವರಲ್ಲಿ ಈ ಬಗ್ಗೆ ಅರಿವು ಉಂಟುಮಾಡುವುದು ಅಗತ್ಯ.

ವೈಯಕ್ತಿಕ ಉತ್ಪಾದಕತೆಗೆ ಮಹತ್ವವಿದೆ. ವ್ಯಕ್ತಿಗಳಿಂದಾದುದು ಒಟ್ಟಾಗಿ ಪ್ರತಿಫಲಿಸುವುದರಿಂದ ವೈಯಕ್ತಿಕ ಉತ್ಪಾದಕತೆಯನ್ನು ಗುರುತಿಸುವುದು ಅವಶ್ಯವಾಗುತ್ತದೆ. ಉದಾಹರಣೆಗೆ 1 ಕೆಲಸದ ಪೂರ್ಣಜ್ಞಾನ, 2 ಉತ್ತೇಜಕಗಳು ಹಾಗೂ ಬಹುಮಾನಗಳು, 3 ಪುನರ್ನಿವೇಶ (ಫೀಡ್ ಬ್ಯಾಕ್) ಇವುಗಳ ಮೂಲಕ ವೈಯಕ್ತಿಕ ಉತ್ಪಾದಕತೆಯನ್ನು ಹೆಚ್ಚಿಸಬಹುದು. ಕೆಲಸದ ಪೂರ್ಣ ಅರಿವಿನಿಂದ ಅವನಿಗೆ ಕೆಲಸ ಮಾಡುವ ಚೈತನ್ಯ ದೊರಕುತ್ತದೆ. ಉತ್ತೇಜಕಗಳಿಂದ ಅವನಿಗೆ ತೃಪ್ತಿ ದೊರೆಯುತ್ತದೆ. ಪುನರ್ನಿವೇಶದಿಂದ ಅವನ ಶ್ರಮದ ಪರಿಣಾಮದ ಅರಿವಾಗುತ್ತದೆ.

## ಗ್ರಾಹಕ ಸೇವೆ

ಉತ್ಪಾದನ ಉದ್ಯಮದಲ್ಲಾದರೆ, ಉತ್ಪಾದನೆಗೆ ಬೇಕಾಗುವ, ಸಾಕಷ್ಟು ಕಚ್ಚಾ ಸಾಮಗ್ರಿಗಳನ್ನು ಶೇಖರಿಸುವ ಎಚ್ಚರಿಕೆಯನ್ನು ವಹಿಸಬೇಕು. ಬ್ಯಾಂಕಿನಂಥ ಸೇವಾ ಉದ್ಯಮದಲ್ಲಿ ಗ್ರಾಹಕರೇ ಬಹು ಮುಖ್ಯ. ಸಾಮಗ್ರಿ ಅಲ್ಲಿ ಬಳಸುವ ದಫ್ತರ, ನಮೂನೆ, ರಶೀತಿ ಇತ್ಯಾದಿಗಳಲ್ಲ! ಆದುದರಿಂದ ಗ್ರಾಹಕರ ಸೇವೆಯ ಕಡೆ ಗಮನ ಕೊಡಬೇಕು. ಬ್ಯಾಂಕುಗಳು ನೀಡುವ ವೈವಿಧ್ಯಮಯವಾದ ಮತ್ತು ಉತ್ತಮ ಮಟ್ಟದ ಸೇವೆ ಗ್ರಾಹಕರ ತೃಪ್ತಿಯಲ್ಲಿ, ಗ್ರಾಹಕರು ವ್ಯಕ್ತಪಡಿಸುವ ಸದ್ಭಾವನೆಯಲ್ಲಿ ವ್ಯಕ್ತವಾಗುತ್ತದೆ. ಠೇವಣಿದಾರರು ಹಾಗೂ ಋಣಿಗಳು, ಇಬ್ಬರ ಮೆಚ್ಚುಗೆಯನ್ನೂ ಗಳಿಸುವಂತೆ ಸೇವೆ ನೀಡುವುದನ್ನು ಬ್ಯಾಂಕುಗಳು ಬೆಳೆಸಿಕೊಳ್ಳಬೇಕು.

ಬ್ಯಾಂಕ್ ಸಿಬ್ಬಂದಿಯವರು ಪರಿಣತಿಯನ್ನು ಮತ್ತು ಹೊಸ ಹೊಸ ಪ್ರಾವೀಣ್ಯವನ್ನು ಪಡೆಯದ ಹೊರತು ಬ್ಯಾಂಕ್ ಗಮನಾರ್ಹವಾಗಿ ಉತ್ಪಾದಕತೆಯನ್ನು ಹೆಚ್ಚಿಸಲಾಗುವುದಿಲ್ಲ. ಕೆಲಸದ ಪುನರ್ವಿನ್ಯಾಸ ಹಾಗೂ ಹೊಸ ಬದಲಾವಣೆಗಳನ್ನು ಮಾಡುವಾಗ ಬ್ಯಾಂಕುಗಳಲ್ಲಿರುವ ಕಾರ್ಮಿಕ ಸಂಘಗಳನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವುದು ಒಳ್ಳೆಯದು. ಕೇವಲ ಪರಸ್ಪರ ಆರೋಪ ಪ್ರತ್ಯಾರೋಪ ಮಾಡುವುದನ್ನು ನಿಲ್ಲಿಸಿದರೆ .ಬ್ಯಾಂಕು ಗ್ರಾಹಕರಿಗೆ ಉತ್ತಮ ಸೇವೆ ಕೊಡಲು ಸಜ್ಜಾಗಬಹುದು. ಪರಸ್ಪರ ಸಂವಹನಕ್ಕೆ ಎಡೆಮಾಡಿಕೊಟ್ಟು ಆಗಾಗ ಅವರನ್ನು ಸಮಾಲೋಚನೆಗೆ ಕರೆಯುವಲ್ಲಿ ಬ್ಯಾಂಕಿನ ವ್ಯವಸ್ಥಾಪಕ ವರ್ಗ ಪ್ರವರ್ತಿಸುವುದು ಉತ್ತಮ.

ನೀವು ಓದಬೇಕಾದ ತ್ರೈಮಾಸಿಕ

ರು ಜು ವಾ ತು

ಸಂಪಾದಕರು : ಡಾ॥ ಯು. ಆರ್. ಅನಂತಮೂರ್ತಿ

ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ ಮೀಸಲಾದ ಪತ್ರಿಕೆ

ವಾರ್ಷಿಕ ಚಂದಾ : ೨೦ ರೂಪಾಯಿಗಳು ಆಜೀವ ಚಂದಾ : ೨೫೦ ರೂಪಾಯಿಗಳು

ವಿಳಾಸ :

ಎನ್. ವಿದ್ಯಾಶಂಕರ್
ವ್ಯವಸ್ಥಾಪಕ ಸಂಪಾದಕ
43/48, 7ನೇ ಕ್ರಾಸ್, ವಸಂತನಗರ
ಬೆಂಗಳೂರು-560 052

ಡಾ॥ ಯು. ಆರ್. ಅನಂತಮೂರ್ತಿ
849, ತೊಣಚಿಕೊಪ್ಪಲು ಬಡಾವಣೆ
ಮೈಸೂರು-570 009

# ವಸತಿಗಾಗಿ ವಾಣಿಜ್ಯ ಬ್ಯಾಂಕುಗಳಿಂದ ಹಣದ ನೆರವು

ಒಡೆಯರ್ ಡಿ. ಹೆಗ್ಗಡೆ

**ವಸತಿ ಸಮಸ್ಯೆ**

ವಸತಿ ಸಮಸ್ಯೆ ವಿಶ್ವವ್ಯಾಪಿಯಾದ್ದು. ಏರುತ್ತಿರುವ ಜನ ಸಂಖ್ಯೆ ಮತ್ತು ಹಳೆಯದಾಗುತ್ತಿರುವ ವಸತಿಗೆ ಬದಲಿ ಪೂರೈಕೆಯ ಕೊರತೆಗಳಿಂದಾಗಿ ವಸತಿ ಸಮಸ್ಯೆ ತೀವ್ರವಾಗಿದೆ. ಈ ದೇಶಗಳಲ್ಲಿ ವಸತಿಹೀನರ ಸಂಖ್ಯೆ ಅಗಾಧವಾದ್ದು. ಅಸ್ತಿತ್ವದಲ್ಲಿರುವ ಪುರಾತನ ವಸತಿಗಳನ್ನು ತೊರೆದು ಹೊಸ ವಸತಿಗಳನ್ನು ನಿರ್ಮಿಸುವ ಮತ್ತು ಹಲವು ವಸತಿಗಳನ್ನು ಪೂರಕ ಸೌಲಭ್ಯಗಳ ಮೂಲಕ ಉತ್ತಮ ಗುಣಮಟ್ಟದವುಗಳಾಗಿ ಪರಿವರ್ತಿಸುವ ಅಗತ್ಯವೂ ಅಭಿವೃದಿಶೀಲ ದೇಶಗಳಲ್ಲಿ ಅಗಾಧವಾಗಿದೆ. ಭಾರತವೂ ವಸತಿ ಸಮಸ್ಯೆಯಿಂದ ಹೊರತಲ್ಲ. ಇಂದು 110 ಕೋಟಿ ಮನೆಗಳನ್ನು ವಿಕಾಸಶೀಲ ದೇಶಗಳ ಗ್ರಾಮೀಣ ಮತ್ತು ನಗರ ಪ್ರದೇಶಗಳ ವಸತಿಹೀನರಿಗಾಗಿ ಕಲ್ಪಿಸಬೇಕಾಗಿದೆ. ಅಭಿವೃದ್ಧಿಶೀಲ ದೇಶಗಳು 60 ಲಕ್ಷ ಮನೆಗಳಿಗಿಂತಲೂ ಕಡಿಮೆ ಪ್ರಮಾಣದಲ್ಲಿ ವಸತಿಯನ್ನು ಪೂರೈಸುತ್ತಿವೆ. ಈ ಅಂಶವನ್ನು ಗಮನಿಸಿದಾಗ ಈ ದೇಶಗಳು ವಸತಿ ಸಮಸ್ಯೆಯ ಪರಿಹಾರಕ್ಕಾಗಿ ತೀವ್ರ ಗಮನ ಹರಿಸದಿರುವುದು ಕಂಡುಬರುತ್ತದೆ.

ನಮ್ಮ ದೇಶದ ಸಮಗ್ರ ವಸತಿ ಕೊರತೆಯ ಗಾತ್ರದ ಬಗೆಗೆ ನಿಖರ ಅಂಕಿ-ಅಂಶಗಳು ಲಭ್ಯವಿಲ್ಲ. 1974–75ರ ವೇಳೆಗೆ ನಗರ ಪ್ರದೇಶಗಳಲ್ಲಿ 38 ಲಕ್ಷ ಘಟಕಗಳು ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ 118 ಲಕ್ಷ ಘಟಕಗಳಷ್ಟು ಮನೆಗಳ ಅಗತ್ಯವಿತ್ತು ಎಂಬುದಾಗಿ ಆರನೆಯ ಯೋಜನೆಯ ಕರಡು ಪ್ರತಿಯಲ್ಲಿ ತಿಳಿಸಲಾಗಿದೆ. ಹಾಗೂ ಪ್ರತಿ ಮನೆಗೆ ರೂ. 12,000 ಮತ್ತು ರೂ. 3,000 ವೆಚ್ಚದಲ್ಲಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಅನುಕ್ರಮವಾಗಿ 12 ಲಕ್ಷ ಮತ್ತು 23 ಲಕ್ಷ ಮನೆಗಳನ್ನು ನಿರ್ಮಿಸಲು ವರ್ಷಂಪ್ರತಿ ರೂ. 2,790 ಕೋಟಿಯನ್ನು ಹೂಡುವ ಅಗತ್ಯವಿದೆ ಎಂಬುದಾಗಿ ಯೋಜನೆಯ ಕರಡು ವಿವರಿಸುತ್ತದೆ. ಈ ಅಂಕಿ-ಅಂಶಗಳು ಅಸ್ತಿತ್ವದಲ್ಲಿರುವ ಹಳೆಯ ಮನೆಗಳ ರಿಪೇರಿ ಮತ್ತು ಉತ್ತಮಿಕೆಯ ವೆಚ್ಚದ ಅಗತ್ಯವನ್ನು ಒಳಗೊಂಡಿಲ್ಲ.

**ನೀತಿಯ ಅಭಾವ**

ನಮ್ಮ ದೇಶದಲ್ಲಿ ವಸತಿ ಸಮಸ್ಯೆಯನ್ನು ಪರಿಹರಿಸಲು ನಿರ್ದಿಷ್ಟ ವಸತಿ ನೀತಿಯನ್ನು ಇನ್ನೂ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ರೂಪಿಸಿಲ್ಲದಿರುವುದು ದುರದೃಷ್ಟಕರ. ವಸತಿ ಸಮಸ್ಯೆಗೆ ಪ್ರಮುಖವಾಗಿ ಆದಾಯದ ಕೊರತೆ, ಅಪರಿಮಿತ ಜನಸಂಖ್ಯಾ ಬೆಳವಣಿಗೆ, ಹಣಕಾಸು ಮತ್ತು ನೈಜ ಸಂಪನ್ಮೂಲದ ಕೊರತೆ, ನಿರ್ದಿಷ್ಟ ಯೋಜನೆ ಇಲ್ಲದಿರುವುದು, ವಸತಿ ನಿರ್ಮಾಣ ಕೈಗಾರಿಕೆ ಶೈಶವಾವಸ್ಥೆಯಲ್ಲಿರುವುದು ಮುಂತಾದ ಅಂಶಗಳೆಲ್ಲವೂ ಕಾರಣವಾಗಿವೆ.

ಧನ ಸಂಪನ್ಮೂಲದ ಕೊರತೆ ಮತ್ತು ಕಟ್ಟಡ ರಚನೆಯ ಪರಿಕರಗಳ ತೀವ್ರ ಅಭಾವ ಇವು ವಸತಿ ಸಮಸ್ಯೆಯನ್ನು ಉಲ್ಬಣಗೊಳಿಸಿವೆ. ವಸತಿ ಸಮಸ್ಯೆಯನ್ನು ಪರಿಹರಿಸಲು ಹಲವು ಸ್ಪಷ್ಟ ಕಾರ್ಯಕ್ರಮಗಳನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಇತ್ತೀಚಿನ ದಶಕಗಳಲ್ಲಿ ಅನುಸರಿಸುತ್ತಿವೆ. ವಸತಿ ಸೌಲಭ್ಯವನ್ನು ಕಲ್ಪಿಸುವುದಕ್ಕಾಗಿ ವಿವಿಧ ಹಣಕಾಸು ಸಂಸ್ಥೆಗಳು ಸಾಲ ಸೌಲಭ್ಯ ಕಲ್ಪಿಸುತ್ತಿವೆ. ವಸತಿ ಅಭಿವೃದ್ಧಿಯಲ್ಲಿ ಖಾಸಗಿ ಕ್ಷೇತ್ರದ ಹಣದ ಹೂಡುವಿಕೆಯೂ ಕ್ರಮೇಣ ಏರುತ್ತಿದೆ. ಆದರೂ ವಸತಿ ಸಮಸ್ಯೆಯ ತೀವ್ರತೆಯನ್ನು ನಿವಾರಿಸಲು ಸಾಧ್ಯವಾಗಿಲ್ಲ.

1969ರಲ್ಲಿ ಪ್ರಮುಖ ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಿಸಿದ ಅನಂತರ ಈ ಸಂಸ್ಥೆಗಳ ಕಾರ್ಯಚಟುವಟಿಕೆಗಳಲ್ಲಿ ಗಮನಾರ್ಹ ಬದಲಾವಣೆಯಾಗಿದೆ. ಇಂದು ಅವು ಸಮತೋಲಯುಕ್ತವಾದ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯಲ್ಲಿ ಪ್ರಧಾನ ಪಾತ್ರ ವಹಿಸುತ್ತಿವೆ. ನಮ್ಮ ದೇಶದಲ್ಲಿ ವಾಣಿಜ್ಯ ಬ್ಯಾಂಕುಗಳು ವಸತಿಗಾಗಿ ಹಣಕಾಸನ್ನು

ಇತ್ತೀಚೆಗೆ ಪೂರೈಸುತ್ತಿವೆ. ವಿಪುಲ ಧನ ಸಂಪನ್ಮೂಲಗಳನ್ನು ಪಡೆದಿರುವ ವಾಣಿಜ್ಯ ಬ್ಯಾಂಕುಗಳು ವಸತಿ ಸಮಸ್ಯೆಯನ್ನು ಪರಿಹರಿಸಲು ಅಧಿಕ ನೆರವನ್ನು ಪೂರೈಸಲು ಶಕ್ತವಿವೆ. ಈ ದಿಸೆಯಲ್ಲಿ ಇಂದು ಪ್ರಯತ್ನಗಳು ಅಗತ್ಯ.

## ವಾಣಿಜ್ಯ ಬ್ಯಾಂಕುಗಳ ಪಾತ್ರ

ಅಮೆರಿಕ ಸಂಯುಕ್ತ ಸಂಸ್ಥಾನ, ಕೆನಡ, ಬ್ರಿಟನ್, ಪಶ್ಚಿಮ ಜರ್ಮನಿ, ಫ್ರಾನ್ಸ್ ಮುಂತಾದ ಅಭಿವರ್ಧಿತ ದೇಶಗಳಲ್ಲಿ ವಾಣಿಜ್ಯ ಬ್ಯಾಂಕುಗಳು ವಸತಿಗಾಗಿ ಪೂರೈಸುತ್ತಿರುವ ನೆರವು ಅಲ್ಪ ಪ್ರಮಾಣದ್ದಾಗಿದೆ. ನಮ್ಮ ದೇಶದ ವಾಣಿಜ್ಯ ಬ್ಯಾಂಕುಗಳು ತಮ್ಮ ಒಟ್ಟು ಸಾಲಹಣ ನೀಡಿಕೆಯ ಸೇ. 1ರಷ್ಟನ್ನು ಮಾತ್ರ ವಸತಿ ನಿರ್ಮಾಣಕ್ಕಾಗಿ ಕೊಡುತ್ತವೆ. ವಸತಿ ಹಣಕಾಸು ಪೂರೈಕೆಯಲ್ಲಿ ನಮ್ಮ ದೇಶದ ಬ್ಯಾಂಕುಗಳ ಪಾತ್ರ ಅತ್ಯಂತ ಕಡಿಮೆಯಾಗಿರುವುದನ್ನು ಈ ಅಂಶ ಸೂಚಿಸುತ್ತದೆ.

ವಸತಿಗಾಗಿ ಹಣಕಾಸು ನೆರವನ್ನು ಕಲ್ಪಿಸುವುದು ನಮ್ಮ ದೇಶದ ವಾಣಿಜ್ಯ ಬ್ಯಾಂಕುಗಳಲ್ಲಿ ಬೆಳೆದುಬಂದಿಲ್ಲ. ಬ್ಯಾಂಕುಗಳಿಂದ ವಸತಿಗಾಗಿ ಹಣಕಾಸು ಪೂರೈಕೆಗೆ ಯಾವುದೇ ಕಾನೂನಿನ ತೊಡಕು ಮತ್ತು ನಿಯಂತ್ರಣಗಳು ನಮ್ಮ ದೇಶದಲ್ಲಿಲ್ಲ. ವಸತಿಗಾಗಿ ದೀರ್ಘ ಕಾಲಾವಧಿ ಹಣ ಪೂರೈಸಲು ನಮ್ಮ ಬ್ಯಾಂಕುಗಳು ಹಿಂದೆಗೆದಿಲ್ಲ. ಬ್ಯಾಂಕುಗಳು ವಸತಿ ಕ್ಷೇತ್ರಕ್ಕೆ ಧನ ಸಂಪನ್ಮೂಲವನ್ನು ಕಲ್ಪಿಸದಿರುವುದಕ್ಕೆ ಬೇರೆಯೇ ಕೆಲವು ಕಾರಣಗಳನ್ನು ನೀಡಲಾಗಿದೆ: 1. ನೈಜ ಆಸ್ತಿ ಹಕ್ಕು, ಆಸ್ತಿ ಮೌಲ್ಯಮಾಪನ, ಮತ್ತು ಸಾಲ ಹಣ ಮರುಪಾವತಿಯಾಗದಿರುವ ಸಂದರ್ಭಗಳಲ್ಲಿ ಎದುರಿಸಬೇಕಾದ ಕಷ್ಟ ಮತ್ತು ಸಮಸ್ಯೆಗಳಿಂದಾಗಿ ಬ್ಯಾಂಕುಗಳು ವಸತಿಗಾಗಿ ಹಣಕಾಸು ನೆರವನ್ನು ಕಲ್ಪಿಸುವುದಕ್ಕೆ ಆಸಕ್ತಿ ವಹಿಸಲಿಲ್ಲ. 2. ವಾಣಿಜ್ಯ ಬ್ಯಾಂಕುಗಳು ವಸತಿಗಾಗಿ ಧನ ಪೂರೈಸುವುದು ಅನುತ್ಪಾದಕ, ಮತ್ತು ಹಣದುಬ್ಬರಕ್ಕೆ ಪ್ರೇರಕ ಎಂದು ಪರಿಗಣಿಸಿದುವು.

1970ರ ದಶಕದಲ್ಲಿ ವಾಣಿಜ್ಯ ಬ್ಯಾಂಕುಗಳು ಅಲ್ಪಸ್ವಲ್ಪ ಹಣಕಾಸು ನೆರವನ್ನು ಕಲ್ಪಿಸಲಾರಂಭಿಸಿದುವು. ಇದು ಬ್ಯಾಂಕುಗಳ ಕಾರ್ಯಾಚರಣೆಯಲ್ಲಿಯ ಬದಲಾವಣೆಯ ಪ್ರತೀಕವಾಗಿದೆ. ಆದರೂ ಅವು ಮೇಲೆ ವಿವರಿಸಲಾದ ತಪ್ಪು ಗ್ರಹಿಕೆಯ ವಿಚಾರಸರಣಿಯಿಂದ ಸಂಪೂರ್ಣವಾಗಿ ಹೊರಬಂದಿಲ್ಲದಿರುವುದು ಇಂದೂ ಸ್ಪಷ್ಟವಾಗಿ ಕಾಣುತ್ತದೆ.

ವಸತಿಗಾಗಿ ವಾಣಿಜ್ಯ ಬ್ಯಾಂಕುಗಳು ಪ್ರತ್ಯಕ್ಷ ಮತ್ತು ಪರೋಕ್ಷ ಹಣಕಾಸು ನೆರವನ್ನು ಪೂರೈಸುತ್ತಿವೆ. ಜೂನ್ 1974ರ ವರೆಗೆ ಇದಕ್ಕಾಗಿ ಬ್ಯಾಂಕುಗಳು ರೂ. 60 ಕೋಟಿಯ ಪ್ರತ್ಯಕ್ಷ ಹಣಕಾಸು ನೆರವನ್ನು ಪೂರೈಸಿವೆ. ಇದರಲ್ಲಿ ಸುಮಾರು ರೂ. 35 ಕೋಟಿಯನ್ನು ವೈಯಕ್ತಿಕ ಸಾಲವಾಗಿ ನೀಡಲಾಗಿದೆ. ಬಹುಮಟ್ಟಿಗೆ ಈ ವೈಯಕ್ತಿಕ ಸೌಲಭ್ಯವನ್ನು ಬ್ಯಾಂಕುಗಳು ತಮ್ಮ ತಮ್ಮ ನೌಕರವರ್ಗಕ್ಕೆ ನೀಡಿವೆಯೆಂಬುದನ್ನು ಗಮನಿಸಬೇಕು. ಸ್ವಲ್ಪ ಹಣ ಹೋಗಿರುವುದು ಬ್ಯಾಂಕ್ ಶಾಖೆಗಳನ್ನು ತೆರೆಯಲು ಕಟ್ಟಡ ರಚನೆಗಾಗಿ ಆಯಾ ನಿವೇಶನಗಳ ಮಾಲೀಕರಿಗೆ. ಪ್ರತ್ಯಕ್ಷ ನೆರವಿನ ಉಳಿದ ರೂ. 25 ಕೋಟಿಯನ್ನು ಖಾಸಗಿ ಕ್ಷೇತ್ರಕ್ಕೆ, ಬೇಡಿದಾಗ ಮರುಪಾವತಿ ಮಾಡಬೇಕೆಂಬ ಷರತ್ತಿನ ಮೇಲೆ, ಅಲ್ಪಾವಧಿ ಸಾಲವಾಗಿಯೂ ನಗದು ಹಾಗೂ ಓವರ್ ಡ್ರಾಫ್ಟ್ ರೂಪದಲ್ಲೂ ನೀಡಲಾಯಿತು. 1974ರ ವೇಳೆಗೆ ವಾಣಿಜ್ಯ ಬ್ಯಾಂಕುಗಳು ವಸತಿ ಸಾಲವಾಗಿ ರೂ. 1 ಕೋಟಿಯನ್ನು ಗೃಹ ನಿರ್ಮಾಣ ಮಂಡಳಿಗಳಿಗೂ ರೂ. 12 ಕೋಟಿಯನ್ನು ಖಾಸಗಿ ಸಂಸ್ಥೆಗಳಿಗೂ ರೂ. 13 ಕೋಟಿಯನ್ನು ಸಹಕಾರಿ ಸಂಸ್ಥೆಗಳಿಗೂ ನೀಡಿದ್ದುವು. ವಾಣಿಜ್ಯ ಬ್ಯಾಂಕುಗಳು ವಸತಿ ಸಮಸ್ಯೆಯ ನಿವಾರಣೆಗಾಗಿ ನೀಡಿರುವ ಹಣ ಬಹಳ ಕಡಿಮೆ.

ವಾಣಿಜ್ಯ ಬ್ಯಾಂಕುಗಳು ಸುಮಾರು ರೂ. 50 ಕೋಟಿಯ ಪರೋಕ್ಷ ಸಾಲ ಸೌಲಭ್ಯವನ್ನು ವಸತಿಗಾಗಿ ಜೂನ್ 1974ರ ವೇಳೆಗೆ ಕಲ್ಪಿಸಿದುವು. ರಾಜ್ಯ ಸಹಕಾರಿ ಗೃಹ ನಿರ್ಮಾಣ ಮಂಡಳಿಗಳು, ರಾಜ್ಯ ಗೃಹ ನಿರ್ಮಾಣ ಮಂಡಳಿಗಳು ಮತ್ತು ನಗರ ಅಭಿವೃದ್ಧಿ ಮತ್ತು ವಸತಿ ನಿಗಮ (ಹುಡ್ಕೋ) ಮುಂತಾದ ಸಂಸ್ಥೆಗಳು ಪ್ರಮುಖವಾಗಿ ನಮ್ಮ ನಗರ ಪ್ರದೇಶಗಳಲ್ಲಿ ವಸತಿ ನಿರ್ಮಿಸುವ ಕಾರ್ಯದಲ್ಲಿ ನಿರತವಾಗಿವೆ. ಈ ಸಂಸ್ಥೆಗಳ ಷೇರು ಪತ್ರಗಳು ಮತ್ತು ಡಿಬೆಂಚರುಗಳಲ್ಲಿ ಹಣವನ್ನು ತೊಡಗಿಸುವುದರ ಮೂಲಕ ಬ್ಯಾಂಕುಗಳು ವಸತಿಗಾಗಿ ಪರೋಕ್ಷವಾಗಿ ಹಣಕಾಸು ನೆರವು ನೀಡುತ್ತಿವೆ. ಒಟ್ಟಿನಲ್ಲಿ ಬ್ಯಾಂಕುಗಳು ಪರೋಕ್ಷವಾಗಿ ಮತ್ತು ಪ್ರತ್ಯಕ್ಷವಾಗಿ ರೂ. 100 ಕೋಟಿಗೂ ಮಿಗಿಲಾಗಿ ಹಣಕಾಸು ನೆರವನ್ನು ವಸತಿ ನಿರ್ಮಾಣಕ್ಕಾಗಿ ನೀಡಿವೆ.

## ‘ವಸತಿಗಾಗಿ ಠೇವಣಿ’

ವಾಣಿಜ್ಯ ಬ್ಯಾಂಕುಗಳು ಸಾರ್ವಜನಿಕರಿಂದ ಹೆಚ್ಚು ಹೆಚ್ಚಾಗಿ ಠೇವಣಿಗಳನ್ನು ಆಕರ್ಷಿಸುವ ದೃಷ್ಟಿಯಿಂದ ಜಾರಿಗೆ ತಂದಿರುವ ನಿರ್ದಿಷ್ಟ ಉಳಿತಾಯ ಯೋಜನೆಗಳ ಅಡಿಯಲ್ಲಿ ವಸತಿಗಾಗಿ ಸಾಲ ನೀಡುತ್ತಿವೆ. ಸಿಂಡಿಕೇಟ್ ಬ್ಯಾಂಕ್ ಮತ್ತು ಇತರ ಬ್ಯಾಂಕುಗಳು ಸಂಚಿತ ಮತ್ತು ವಸತಿ ಠೇವಣಿಗಳನ್ನು ಸಾರ್ವಜನಿಕರಿಗಾಗಿ 5–10 ವರ್ಷಗಳ ಅವಧಿಗಾಗಿ ನೀಡುತ್ತಿವೆ. ಈ ಉಳಿತಾಯ ಯೋಜನೆಗಳಲ್ಲಿ ನಿರ್ದಿಷ್ಟ ಅವಧಿಯಲ್ಲಿ ನಿರ್ದಿಷ್ಟ ಮೊಬಲಗನ್ನು 5 ಅಥವಾ

10 ವರ್ಷಗಳ ವರೆಗೆ ಠೇವಣಿ ಮಾಡಲಾಗುತ್ತದೆ. ಅವಧಿ ಮುಗಿದ ಅನಂತರ ಆ ಬ್ಯಾಂಕು ಸೂಚಿತ ಠೇವಣಿ ಹಣದಷ್ಟೇ ಸಾಲವನ್ನು ಠೇವಣಿ ಹಣದ ಜೊತೆಗೇ ಠೇವಣಿದಾರರಿಗೆ ವಸತಿಗಾಗಿ ನೀಡುತ್ತದೆ. ಇದನ್ನು ಅಡಮಾನ ಸಾಲಗಳ ಕಾನೂನುಗಳಿಗೆ ಅನುಗುಣವಾಗಿ ಬ್ಯಾಂಕುಗಳು ನೀಡುತ್ತವೆ. ಈ ಯೋಜನೆಯ ಪ್ರಕಾರ ಹೊಸ ಮನೆಯನ್ನು ಕೊಳ್ಳುವ, ಅಥವಾ ನಿರ್ಮಿಸುವ ವೆಚ್ಚದಲ್ಲಿ ಭಾಗಶಃ ಹಣವನ್ನು ಆಯಾ ವ್ಯಕ್ತಿಯೇ ಪೂರೈಸಬೇಕು. ಮತ್ತು ಭಾಗಶಃ ಹಣವನ್ನು ಬ್ಯಾಂಕು ಪೂರೈಸುತ್ತದೆ. ವಾಣಿಜ್ಯ ಬ್ಯಾಂಕುಗಳ ಈ ಬಗೆಯ ಠೇವಣಿ ಕ್ರಮೇಣ ನಗರ ಪ್ರದೇಶಗಳ ಮಧ್ಯಮ ಮತ್ತು ಅಧಿಕ ಆದಾಯ ವರ್ಗಗಳಲ್ಲಿ ಜನಪ್ರಿಯವಾಗುತ್ತಿದೆ. ಸಂಚಿತ ಮತ್ತು ವಸತಿ ಠೇವಣಿಯ ಪ್ರಮುಖ ಕೊರತೆಯೆಂದರೆ ಅದಕ್ಕೆ ಹಣದುಬ್ಬರದ ವಿರುದ್ಧ ಸಂರಕ್ಷಣೆಯಿಲ್ಲ. ಇಂದು ಹಣದುಬ್ಬರ ಅಸ್ತಿತ್ವದಲ್ಲಿದೆ. ಇದರಿಂದ ವಸತಿ ನಿರ್ಮಾಣ ವೆಚ್ಚ ಗಣನೀಯವಾಗಿ ಏರಿಕೆಯಾಗುತ್ತಿದೆ. ಪರಿಣಾಮವಾಗಿ ವಸತಿ ಠೇವಣಿಯ ಅವಧಿ ಮುಗಿದ ಅನಂತರ ಲಭಿಸುವ ಹಣದಿಂದ ಉದ್ದೇಶಿತ ರೀತಿಯಲ್ಲಿ ವಸತಿಯನ್ನು ನಿರ್ಮಿಸಿಕೊಳ್ಳುವುದು ಠೇವಣಿದಾರರಿಗೆ ಸಾಧ್ಯವಾಗದೆ ಹೋಗುತ್ತದೆ. ಆದ್ದರಿಂದ ಅವರು ಸಂಕಷ್ಟಕ್ಕೆ ಗುರಿಯಾಗುವರು. ಈ ಸಮಸ್ಯೆಯನ್ನು ಸೂಕ್ತ ರೀತಿಯಲ್ಲಿ ಪರಿಹರಿಸುವುದು ಅವಶ್ಯವಾಗಿದೆ. ಹಣದುಬ್ಬರದ ದರಕ್ಕೆ ಅನುಗುಣವಾಗಿ ಠೇವಣಿ ವಂತಿಗೆಯಲ್ಲಿ ಏರಿಕೆ ಮಾಡುವುದು ಇದಕ್ಕೆ ಸೂಕ್ತ ಪರಿಹಾರವಾಗುತ್ತದೆ. ಇಂಥ ಕ್ರಮವನ್ನು ಕೆಲವು ಬ್ಯಾಂಕುಗಳು ಪಾಶ್ಚಾತ್ಯ ದೇಶಗಳಲ್ಲಿ ಕೈಗೊಂಡಿವೆ. ಈ ಬಗೆಯ ಠೇವಣಿ ಯೋಜನೆ ಸಮಾಜದ ಕೆಳ ಆದಾಯ ವರ್ಗಗಳಲ್ಲಿ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚು ಪ್ರಚಲಿತವಾಗಿಲ್ಲ. ಇದಕ್ಕೆ ಬಡತನ ಮತ್ತು ನಿರುದ್ಯೋಗಗಳೇ ಮುಖ್ಯ ಕಾರಣಗಳಾಗಿವೆ.

ರಾಜ್ಯ ಗೃಹ ನಿರ್ಮಾಣ ಮಂಡಳಿಗಳಲ್ಲಿ ಠೇವಣಿ ಇಡುವ ಕೆಳ ಆದಾಯ ವರ್ಗಗಳ ವ್ಯಕ್ತಿಗಳಿಗಾಗಿ ವಸತಿ ಕಲ್ಪಿಸುವ ಯೋಜನೆಗಳ ಕಾರ್ಯವನ್ನು ಪೂರೈಸಲು ಗೃಹಮಂಡಳಿಗಳಿಗೆ ವಾಣಿಜ್ಯ ಬ್ಯಾಂಕುಗಳು ಹಣಕಾಸನ್ನು ಪೂರೈಸುತ್ತಿವೆ. ಆದರೆ ಬ್ಯಾಂಕುಗಳು ಹೀಗೆ ನೀಡುವ ಸಾಲ ಅತ್ಯಲ್ಪವಾಗಿದೆ. ದುರ್ಬಲ ವರ್ಗಗಳ ವ್ಯಕ್ತಿಗಳಿಗೆ ನೀಡಲಾಗುವ, ಗೃಹ ನಿರ್ಮಾಣ ಮಂಡಳಿಗಳ ಠೇವಣಿ ಹಣ ಯೋಜನೆ 15 ತಿಂಗಳುಗಳಿಂದ 5 ವರ್ಷಗಳ ವರೆಗಿನ ಅವಧಿಯದಾಗಿರುತ್ತದೆ. ಅವಧಿ ಮುಗಿದ ಅನಂತರ ಸಂಬಂಧಪಟ್ಟ ಬ್ಯಾಂಕು ಮೂಲ ಬಂಡವಾಳ ಮತ್ತು ಬಡ್ಡಿಯ ಜೊತೆಗೆ ಒಟ್ಟು ಠೇವಣಿ ಹಣದ ಮೂರರಷ್ಟನ್ನು ಗೃಹ ನಿರ್ಮಾಣ ಮಂಡಳಿಗಳಿಗೆ ಸಾಲದ ರೂಪದಲ್ಲಿ, ದುರ್ಬಲ ವರ್ಗದವರಿಗಾಗಿ ವಸತಿ ನಿರ್ಮಿಸುವುದಕ್ಕಾಗಿ, ನೀಡುತ್ತದೆ. ರಾಜ್ಯ ಗೃಹ ಮಂಡಳಿಗಳು ಮತ್ತು ರಾಷ್ಟ್ರೀಕೃತ ಬ್ಯಾಂಕುಗಳು ಒಟ್ಟುಗೂಡಿ ಇತ್ತೀಚೆಗೆ ಆರಂಭಿಸಿರುವ ವಸತಿ ಸಂಬಂಧಿ ಠೇವಣಿ ಯೋಜನೆ ನಗರ ಪ್ರದೇಶಗಳ ಕೆಳ ಆದಾಯ ವರ್ಗದವರಲ್ಲಿ ಕ್ರಮೇಣ ಜನಾದರಣೀಯವಾಗುತ್ತಿದೆ. ನಗರ ಮತ್ತು ಗ್ರಾಮೀಣ ಪ್ರದೇಶಗಳ ದುರ್ಬಲ ವರ್ಗದವರ ವಸತಿ ಸಮಸ್ಯೆಯ ಸ್ವರೂಪ ಮತ್ತು ವ್ಯಾಪ್ತಿಯನ್ನು ಪರಿಗಣಿಸಿದಾಗ ಈ ದಿಸೆಯಲ್ಲಿ ಇನ್ನೂ ದಿಟ್ಟ ಪ್ರಯತ್ನದ ಅಗತ್ಯವಿದೆ ಎನಿಸುತ್ತದೆ. ದುರ್ಬಲ ವರ್ಗದ ಜನ 'ವಸತಿಗಾಗಿ ಠೇವಣಿ' ಕಾರ್ಯಕ್ರಮದ ಸೌಲಭ್ಯಗಳನ್ನು ಪಡೆಯುವಂತೆ ಬ್ಯಾಂಕುಗಳು ಮತ್ತು ಗೃಹ ನಿರ್ಮಾಣ ಮಂಡಳಿಗಳು ಸ್ವಯಂಪ್ರೇರಿತ ಸಂಘಗಳ ನೆರವಿನೊಡನೆ ಉತ್ತೇಜನ ನೀಡುವ ಅಗತ್ಯವಿದೆ.

### ಬದಲಾವಣೆಯ ಅಗತ್ಯ

ಆರ್ಥಿಕ ಮತ್ತು ಸಾಮಾಜಿಕ ಅಭ್ಯುದಯದ ದೃಷ್ಟಿಯಿಂದ ವಸತಿ ಸಮಸ್ಯೆಯ ಪರಿಹಾರ ಇಂದಿನ ಅಗತ್ಯವಾಗಿದೆ. ಆದ್ದರಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಒಟ್ಟುಗೂಡಿ ರಾಷ್ಟ್ರೀಯ ವಸತಿ ನೀತಿಯನ್ನು ರೂಪಿಸಿ ಅದನ್ನು ಜಾರಿಗೆ ತರುವುದು ಸೂಕ್ತವಾಗಿದೆ. ವ್ಯವಸ್ಥಿತ ಕಾರ್ಯಕ್ರಮಗಳನ್ವಯ ವಸತಿಯ ಸಮಸ್ಯೆಯನ್ನು ನಿವಾರಿಸಲು ಅಗಾಧ ಸಂಪನ್ಮೂಲವನ್ನು ತೊಡಗಿಸಬೇಕಾಗಿದೆ. ಆದ್ದರಿಂದ ಇಂದು ವಸತಿಗಾಗಿ ಹಣಕಾಸು ಸಂಪನ್ಮೂಲ ಪೂರೈಸುತ್ತಿರುವ ವಿವಿಧ ಹಣಕಾಸು ಸಂಸ್ಥೆಗಳ ಕಾರ್ಯಾಚರಣೆಯಲ್ಲಿ ಗಮನಾರ್ಹ ಬದಲಾವಣೆಗಳನ್ನು ತರುವುದು ಅವಶ್ಯವಾಗಿದೆ. ವಸತಿಗಾಗಿ ಸಾಂಸ್ಥಿಕ ಹಣಕಾಸು ಪೂರೈಕೆಯ ಅಂಶವನ್ನು ರಾಷ್ಟ್ರೀಯ ವಸತಿ ನೀತಿ ಒಳಗೊಳ್ಳಬೇಕು. ವಸತಿ ಪೂರೈಕೆಯ ಭೌತಿಕ ಯೋಜನೆಯ ಅಂಶಗಳಾದ ನಿವೇಶನ ಹಂಚಿಕೆ, ಸ್ಥಳ ಮತ್ತು ಸೇವಾ ಸೌಲಭ್ಯಗಳ ಪೂರೈಕೆ, ಕಟ್ಟಡ ರಚನೆ, ಕಟ್ಟಡ ಸಾಮಗ್ರಿಗಳ ಉತ್ಪಾದನೆ ಮತ್ತು ಹಂಚಿಕೆ, ಸ್ಥಳೀಯ ಸಂಪನ್ಮೂಲಗಳ ಬಳಕೆ, ಮುಂತಾದವನ್ನು ಒಳಗೊಂಡ ನೀತಿಯೊಂದನ್ನು ರೂಪಿಸುವುದು ಅಗತ್ಯ. ಉಳಿತಾಯ ಪ್ರವೃತ್ತಿಯ ಹೆಚ್ಚಳವನ್ನೂ ಅಧಿಕ ಸಾಂಸ್ಥಿಕ ಹಣಕಾಸನ್ನೂ 'ವಸತಿಗಾಗಿ ಹಣಕಾಸು ಪೂರೈಕೆ' ನೀತಿಯಲ್ಲಿ ಅಳವಡಿಸಿಕೊಳ್ಳಬೇಕು. ವಸತಿ ನೀತಿಯನ್ನೂ ಭೌತಿಕ ಮತ್ತು ಧನ ಸಂಪನ್ಮೂಲ ಯೋಜನೆಗಳನ್ನೂ ಸಮನ್ವಯಗೊಳಿಸುವುದು ಅವಶ್ಯ. ಇವೆರಡೂ ಪರಸ್ಪರ ಸಮಸ್ಪಂದಿಯಾಗುವಂತೆ ನೋಡಿಕೊಳ್ಳುವುದು ಸೂಕ್ತ. ಇಂಥ ನೀತಿಯೊಂದರ ಅನುಸರಣೆಯಿಂದ ವಸತಿ ಸಮಸ್ಯೆಯನ್ನು ಪರಿಹರಿಸುವುದು ಸಾಧ್ಯವಿದೆ; ಹಾಗೂ ಈ ಬಗೆಯ ಸ್ಪಷ್ಟ ಕಾರ್ಯಕ್ರಮಗಳನ್ವಯ

ಅನುಸರಣೆಗೆ ಬರುವ ವಸತಿ ಯೋಜನೆಗಳಿಗೆ ವಿವಿಧ ಹಣಕಾಸು ಸಂಸ್ಥೆಗಳು ಸಂಪನ್ಮೂಲವನ್ನು ಪೂರೈಸುವುದು ಸುಲಭವಾಗುತ್ತದೆ.

ವಾಣಿಜ್ಯ ಬ್ಯಾಂಕುಗಳು ವಸತಿಗಾಗಿ ಅಧಿಕ ಹಣಕಾಸು ಸಂಪನ್ಮೂಲವನ್ನು ಎರಡು ಹಂತಗಳಲ್ಲಿ ಪೂರೈಸಬಹುದಾಗಿದೆ: 1. ಸಾರ್ವಜನಿಕ ಮತ್ತು ಸಹಕಾರಿ ಸಂಘ ಸಂಸ್ಥೆಗಳ ಮೂಲಕ ವಿಪುಲವಾಗಿ ವಸತಿಯನ್ನು ಕಲ್ಪಿಸುವುದಕ್ಕಾಗಿ ಇಂದು ಯತ್ನಗಳು ನಡೆಯುತ್ತಿವೆ. ಸಹಕಾರಿ ವಸತಿ ಸಂಸ್ಥೆಗಳು, ದುರ್ಬಲ ವರ್ಗಗಳ ಸಹಕಾರಿ ಸಂಸ್ಥೆಗಳು, ರಾಜ್ಯ ಗೃಹ ನಿರ್ಮಾಣ ಮಂಡಳಿಗಳು, ಹುಡ್ಕೋ, ನಗರ ಅಭಿವೃದ್ಧಿ ಪ್ರಾಧಿಕಾರಗಳು ಮತ್ತು ನಗರ ಬೆಳವಣಿಗೆ ಟ್ರಸ್ಟುಗಳು, ಮುನಿಸಿಪಲ್ ಕಾರ್ಪೋರೇಷನ್‌ಗಳು ಮುಂತಾದ ಸಾರ್ವಜನಿಕ ಹಾಗೂ ಸಹಕಾರಿ ಕ್ಷೇತ್ರಗಳ ಸಂಘ ಸಂಸ್ಥೆಗಳು ವಸತಿ ಪೂರೈಕೆಯಲ್ಲಿ ನಿರತವಾಗಿವೆ. ಈ ಸಂಸ್ಥೆಗಳ ವಸತಿ ಪೂರೈಕೆ ಸಾಮರ್ಥ್ಯವನ್ನು ಹೆಚ್ಚಿಸುವುದಕ್ಕಾಗಿ ವಾಣಿಜ್ಯ ಬ್ಯಾಂಕುಗಳು ಅವುಗಳ ಷೇರುಪತ್ರಗಳು ಮತ್ತು ಡಿಬೆಂಚರುಗಳಲ್ಲಿ ಅಧಿಕ ಸಂಪನ್ಮೂಲವನ್ನು ತೊಡಗಿಸಬೇಕು. ಬ್ಯಾಂಕುಗಳ ಈ ಬಗೆಯ ಚಟುವಟಿಕೆಯನ್ನು ಆದ್ಯತಾ ಕ್ಷೇತ್ರಗಳಿಗೆ ಅವು ನೀಡುವ ಸಾಲವೆಂದು ರಿಸರ್ವ್ ಬ್ಯಾಂಕು ಮತ್ತು ಸರ್ಕಾರ ಪರಿಗಣಿಸಬೇಕು. ಬ್ಯಾಂಕುಗಳು ತಮ್ಮ ಒಟ್ಟು ಸಾಲ ನೀಡಿಕೆಯ ನಿರ್ದಿಷ್ಟ ಭಾಗವನ್ನು ಇದಕ್ಕಾಗಿ ತೆಗೆದಿಡಬೇಕು. ಸಹಕಾರಿ ಮತ್ತು ಸಾರ್ವಜನಿಕ ಕ್ಷೇತ್ರಗಳ ವಸತಿ ನಿರ್ಮಾಣ ಸಂಸ್ಥೆಗಳು ಹೆಚ್ಚು ಕ್ರಿಯಾಶೀಲವಾಗಿ ಕಾರ್ಯೋನ್ಮುಖವಾಗಿ ವಾಣಿಜ್ಯ ಬ್ಯಾಂಕುಗಳಿಂದ ಅಧಿಕ ಸಂಪನ್ಮೂಲವನ್ನು ತಮ್ಮ ತಮ್ಮ ಯೋಜನೆಗಳಿಗೆ ಪಡೆಯುವಲ್ಲಿ ಯಶಸ್ವಿಯಾಗಬೇಕು. 2. ಇದುವರೆಗೆ ಬ್ಯಾಂಕುಗಳು ವಸತಿಗಾಗಿ ನೀಡಿರುವ ವೈಯುಕ್ತಿಕ ಸಾಲ ಬಹುಮಟ್ಟಿಗೆ ಬ್ಯಾಂಕ್ ನೌಕರರ ವರ್ಗಕ್ಕೇ ಲಭಿಸಿರುವುದು ಸರ್ವ ವಿದಿತವಾಗಿದೆ. ಇಂಥ ಧೋರಣೆ ರಾಷ್ಟ್ರೀಕೃತ ಬ್ಯಾಂಕುಗಳಿಗೆ ಇನ್ನು ಮುಂದೆಯೂ ಸರ್ವಥಾ ಸಲ್ಲದು. ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳು ವಸತಿಗಾಗಿ ಹಣಕಾಸು ನೆರವನ್ನು ವೈಯಕ್ತಿಕ ರೂಪದಲ್ಲಿ ಆದ್ಯತೆ ಕ್ಷೇತ್ರದ ಸಾಲ ನೀಡಿಕೆ ಕಾರ್ಯಕ್ರಮದನ್ವಯ ನೀಡುವಂತಾಗಬೇಕು. ಆಗ ಮಾತ್ರ ವ್ಯಕ್ತಿಗತ ಹಂತದಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶಗಳ ವಸತಿ ಸಮಸ್ಯೆಯನ್ನು ಪರಿಹರಿಸುವುದು ಸಾಧ್ಯ. ಈ ದಿಸೆಯಲ್ಲಿ ನಮ್ಮ ಸರಕಾರ ಮತ್ತು ರಿಸರ್ವ್ ಬ್ಯಾಂಕು ಕಾರ್ಯಪ್ರವೃತ್ತವಾಗುವುದು ಇಂದಿನ ಅಗತ್ಯ.

ನಮ್ಮ ದೇಶದ ವಸತಿ ಸಮಸ್ಯೆ ಬಲು ಸಂಕೀರ್ಣವೂ ಕ್ಲಿಷ್ಟಕರವೂ ಆಗಿದೆ. ಅದಕ್ಕಾಗಿ ವಿಪುಲ ಸಾಂಸ್ಥಿಕ ಹಣಕಾಸು ನೆರವಿನ ಅಗತ್ಯವಿದೆ. ಈ ದಿಸೆಯಲ್ಲಿ ವಾಣಿಜ್ಯ ಬ್ಯಾಂಕುಗಳು ಗಮನಾರ್ಹ ಜವಾಬ್ದಾರಿಯನ್ನು ನಿರ್ವಹಿಸುವ ಶಕ್ತಿ ಪಡೆದಿವೆ. ಅದನ್ನು ಸಾರ್ವತ್ರಿಕ ಅಭ್ಯುದಯದ ದೃಷ್ಟಿಯಿಂದ ಬಳಸಿಕೊಳ್ಳುವುದಕ್ಕೆ ನಿರ್ದಿಷ್ಟ ನೀತಿಯ ಅನುಸರಣೆ ಆವಶ್ಯಕವಾಗಿದೆ. ಆದ್ದರಿಂದ ವಸತಿಗಾಗಿ ವಾಣಿಜ್ಯ ಬ್ಯಾಂಕುಗಳಿಂದ ವಿಪುಲ ಸಂಪನ್ಮೂಲಗಳನ್ನು ಪಡೆಯಲು ಇಂದು ನಮ್ಮ ಸರಕಾರ ಪ್ರಯತ್ನ ನಡೆಸಬೇಕಾಗಿದೆ. ಇಂಥ ಪ್ರಯತ್ನಗಳಿಂದಲೇ ಹಿಂದುಳಿದ ದುರ್ಬಲ ವರ್ಗಗಳ ಸಾಮಾಜಿಕ ಅಭ್ಯುದಯವನ್ನು ಸಾಧಿಸಬಹುದಾಗಿದೆ.

ನಿಮ್ಮ ಉಳಿತಾಯದ ಹಣವನ್ನು ನಮ್ಮಲ್ಲಿ ಠೇವಾಗಿರಿಸಿರಿ.

ನಮ್ಮ ಆಕರ್ಷಕ ಬಡ್ಡಿಯಿಂದ ಅದು ವೃದ್ಧಿಯಾಗುವುದನ್ನು ನೋಡಿರಿ.

62 ವರ್ಷಗಳ ಸಮಗ್ರ ಮತ್ತು ಸಮರ್ಥ ಸೇವೆ

ಹೊನ್ನಾವರ ಅರ್ಬನ್
ಕೋ-ಆಪರೇಟಿವ್ ಬ್ಯಾಂಕ್
ಲಿಮಿಟೆಡ್
ಹೊನ್ನಾವರ–581334

# ಸುದ್ದಿ ಸಾರ

ಸಾ. ಅ. ನಂಜುನಾಥ

**ಬೆಂಗಳೂರು ಸ್ಟಾಕ್ ಎಕ್ಸ್‌ಚೇಂಜಿಗೆ ಹೊಸ ಕಟ್ಟಡ**

ಬೆಂಗಳೂರಿನ ಸ್ಟಾಕ್ ವಿನಿಮಯ ಕೇಂದ್ರ ನಗರ ಸಭೆಯಿಂದ ಗುತ್ತಿಗೆಗೆ ಪಡೆದ ನಿವೇಶನದಲ್ಲಿ ಒಂದು ಬಹು ಮಹಡಿ ಕಟ್ಟಡವನ್ನು ನಿರ್ಮಿಸಲಿದೆಯೆಂದು ಕೇಂದ್ರದ ಅಧ್ಯಕ್ಷ ಕೆ. ವಿ. ಶಂಕರ್ ತಿಳಿಸಿದ್ದಾರೆ. ಕಟ್ಟಡಕ್ಕೆ ತಗಲುವ ವೆಚ್ಚ ರೂ. 32 ಲಕ್ಷ. ಇದರಲ್ಲಿ ವಹಿವಾಟುಗಳನ್ನು ಅತ್ಯಾಧುನಿಕ ಸ್ವಯಂಚಾಲಿತ ವಿದ್ಯುತ್ ವ್ಯವಸ್ಥೆಯಲ್ಲಿ ನಡೆಸಲು ಅನುವಾಗುವ ವ್ಯವಹಾರಾಂಗಣ, ಪ್ರೇಕ್ಷಕರ ಗ್ಯಾಲರಿ, 1000 ಜನ ಕೂರಬಹುದಾದ—ಸಭೆ ಸಮ್ಮೇಳನಗಳಿಗೆ ಅನುವಾಗುವ—ಸಭಾಂಗಣ, ಪುಸ್ತಕ ಭಂಡಾರ ಇವೆಲ್ಲವೂ ಇರುವುವೆಂದು ಅವರು ತಿಳಿಸಿದ್ದಾರೆ.

**ಖಾಸಗಿ ಬ್ಯಾಂಕುಗಳ ಕಾರ್ಯನಿರ್ವಹಣೆ**

ಬಿರ್ಲಾ ವೈಜ್ಞಾನಿಕ ಸಂಶೋಧನ ಸಂಸ್ಥೆಯವರು ನಡೆಸಿದ ಒಂದು ಅಧ್ಯಯನದ ಪ್ರಕಾರ ಠೇವಣಿಗಳು, ಮುಂಗಡಗಳು ಮತ್ತು ಶಾಖೆಗಳ ವಿಷಯದಲ್ಲಿ ಖಾಸಗಿ ವಲಯ ಬ್ಯಾಂಕುಗಳು ರಾಷ್ಟ್ರೀಕೃತ ಬ್ಯಾಂಕುಗಳಿಗಿಂತ ಕಳೆದ ಒಂದು ದಶಕದಲ್ಲಿ ಹೆಚ್ಚಿನ ಬೆಳವಣಿಗೆ ಸಾಧಿಸಿವೆ.

ಹದಿನಾಲ್ಕು ರಾಷ್ಟ್ರೀಕೃತ ಬ್ಯಾಂಕುಗಳು ಮತ್ತು ಖಾಸಗಿ ವಲಯದ ಹದಿಮೂರು ಪ್ರಮುಖ ಬ್ಯಾಂಕುಗಳ ಕಾರ್ಯನಿರ್ವಹಣೆಯ ತೌಲನಿಕ ಅಧ್ಯಯನದಿಂದ ಹೊರಬಿದ್ದ ಅಂಶವೇನೆಂದರೆ, ಖಾಸಗಿ ಬ್ಯಾಂಕುಗಳ ಆಡಳಿತ ವೆಚ್ಚ ಹೆಚ್ಚಾಗಿದ್ದರೂ ಅವುಗಳ ಲಾಭಗಳಿಕೆಯ ಪ್ರಮಾಣ ಹೆಚ್ಚಾಗಿಯೇ ಇತ್ತು ಎಂಬುದು.

ಖಾಸಗಿ ವಲಯದ ಬ್ಯಾಂಕುಗಳ ಶಾಖಾ ವಿಸ್ತರಣೆಯ ದರ ಸೇ. 18.7 ಇದ್ದರೆ ರಾಷ್ಟ್ರೀಕೃತ ವಲಯದಲ್ಲಿ ಅದು ಸೇ. 14.6 ಇದೆ ಎಂಬುದು ಈ ಅಧ್ಯಯನದಿಂದ ತಿಳಿದು ಬಂದಿದೆ.

**ವಿಶ್ವ ವಾಣಿಜ್ಯ ಬೆಳವಣಿಗೆ**

ವಿಶ್ವ ವಾಣಿಜ್ಯ ಬೆಳವಣಿಗೆಯ ದರ 1979ರಲ್ಲಿ ಸೇ. 6 ರಷ್ಟು ಇದ್ದದ್ದು 1980ರಲ್ಲಿ ಸೇ. 2–3ಕ್ಕೆ ಇಳಿದಿದೆಯೆಂದು ವಿಶ್ವ ಬ್ಯಾಂಕಿನ ವಾರ್ಷಿಕ ವಾಣಿಜ್ಯ ವಿಶ್ಲೇಷಣೆಯ ವರದಿ ತಿಳಿಸಿದೆ. ಕಚ್ಚಾ ತೈಲದ ಆಮದು ರಫ್ತುಗಳಲ್ಲಿ ಆದ ಏರುಪೇರು ಈ ಇಳಿತಕ್ಕೆ ಕಾರಣವೆಂದು ವಿಶ್ಲೇಷಣೆ ಹೇಳಿದೆ.

**ಭೂ ಅಭಿವೃದ್ಧಿ ಬ್ಯಾಂಕು ಸಾಲ**

ಪಂಪು ಸೆಟ್ಟುಗಳನ್ನು ಕೊಳ್ಳಲು ರೈತರಿಗೆ ಭೂ ಅಭಿವೃದ್ಧಿ ಬ್ಯಾಂಕುಗಳು ನೀಡಿದ ಸಾಲದ ಮರುಪಾವತಿಯ ಗರಿಷ್ಠ ಅವಧಿಯನ್ನು 7 ವರ್ಷಗಳಿಂದ 9 ವರ್ಷಗಳಿಗೆ ಹೆಚ್ಚಿಸಲಾಗಿದೆ.

**ಖರೀದಿದಾರರ ಸಾಲ: ಬಡ್ಡಿ ಸಹಾಯ ಧನ**

ಭಾರತದಿಂದ ಯಂತ್ರಗಳು ಮತ್ತು ಸಲಕರಣೆಗಳನ್ನು ಆಮದುಮಾಡಿಕೊಳ್ಳಲು ಹೊರದೇಶಗಳಲ್ಲಿರುವ ಗ್ರಾಹಕರಿಗೆ, ರಿಸರ್ವ್ ಬ್ಯಾಂಕಿನಿಂದ ಅಂಗೀಕೃತವಾದ ವಾಯಿದೆಯ ಪಾವತಿ ಕರಾರುಗಳಿಗೆ ಅನುಗುಣವಾಗಿ, ವಾಣಿಜ್ಯ ಬ್ಯಾಂಕುಗಳು 15ನೆಯ ಸೆಪ್ಟೆಂಬರ್ 1980 ಅಥವಾ ಅನಂತರ ನೀಡಿದ ಖರೀದಿದಾರರ ಸಾಲಗಳು 1968ರ ರಫ್ತು ಸಾಲ (ಸಹಾಯ ಧನ) ಯೋಜನೆ ಮೇರೆಗೆ ಬಡ್ಡಿ ಸಹಾಯ ಧನವನ್ನು ಪಡೆಯಲು ಅರ್ಹವಾಗಿವೆ. ನೀಡಲಾಗುವ ಸಹಾಯ ಧನದ ಗರಿಷ್ಠ ಮೊಬಲಗು ಸಾಲಿಯಾನ ಸೇಕಡ $1\frac{1}{2}$. ಬಡ್ಡಿ ನೆರವಿಗಾಗಿ ಅರ್ಹವಾಗುವ ಖರೀದಿದಾರರ ಸಾಲಗಳಿಗೆ ವಿಧಿಸಬೇಕಾದ ಬಡ್ಡಿ ದರವನ್ನು ರಿಸರ್ವ್ ಬ್ಯಾಂಕು ಆಯಾ ವಹಿವಾಟನ್ನು ಪರಿಗಣಿಸಿ ಅಂಗೀಕರಿಸುತ್ತದೆ.

**ಭಿನ್ನಕ ಬಡ್ಡಿ ದರ ಸಾಲ ಯೋಜನೆ: ಪ್ರಾದೇಶಿಕ ಬ್ಯಾಂಕುಗಳು**

ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳೂ ಭಿನ್ನಕ ಬಡ್ಡಿ ದರ ಯೋಜನೆಯನ್ವಯ ಸಾಲಗಳನ್ನು ನೀಡಲು ಅನುಕೂಲವಾಗುವಂತೆ ಕೇಂದ್ರ ಸರಕಾರ ಇತ್ತೀಚೆಗೆ ಈ ಯೋಜನೆಯನ್ನು ಮಾರ್ಪಾಟು ಮಾಡಿದೆ. ಇದರಿಂದ ವಾಣಿಜ್ಯ ಬ್ಯಾಂಕುಗಳು ತಾವು ಪುರೋನಿಧಾನಗೊಳಿಸಿದ ಪ್ರಾದೇಶಿಕ

ಗ್ರಾಮೀಣ ಬ್ಯಾಂಕುಗಳ ಮೂಲಕ ಪುನರ್ಧನ ವ್ಯವಸ್ಥೆಯ ಆಧಾರದ ಮೇಲೆ ಸಾಲಗಳನ್ನು ನೀಡಬಹುದಾಗಿದೆ. ಈ ಮಾರ್ಪಾಟಿಗೆ ಅನುಗುಣವಾಗಿ ಬ್ಯಾಂಕುಗಳು ಅನುಸರಿಸ ಬೇಕಾದ ಕೆಲವು ರೀತಿ-ನೀತಿಗಳನ್ನು ರಿಸರ್ವ್ ಬ್ಯಾಂಕು ನಿರ್ಧರಿಸಿದೆ.

ಭಿನ್ನಕ ಬಡ್ಡಿ ದರದ ಸಾಲ ಯೋಜನೆ ಇರುವುದು ಮುಖ್ಯ ವಾಗಿ ಸಮಾಜದ ಅತ್ಯಂತ ಹಿಂದುಳಿದ ವರ್ಗದವರಿಗಾಗಿ. ಆದುದರಿಂದ ಈ ಯೋಜನೆಯನ್ವಯ ಸಾಲ ನೀಡುವಾಗ ಸಾಲಗಾರನ ಆಯ್ಕೆಯನ್ನು ಅತಿ ಎಚ್ಚರಿಕೆಯಿಂದ ಮಾಡ ಲಾಗುತ್ತದೆ. ಎಲ್ಲ ಮೂಲಗಳಿಂದ ಕುಟುಂಬದ ವರಮಾನ ಗ್ರಾಮೀಣ ಪ್ರದೇಶದಲ್ಲಿ ರೂ. 2,000ಕ್ಕೂ ಅರೆಪಟ್ಟಣ ಮತ್ತು ಪಟ್ಟಣ ಪ್ರದೇಶಗಳಲ್ಲಿ ರೂ. 3,000ಕ್ಕೂ ಮೀರಿರ ದಿದ್ದರೆ ಅಂಥ ಕುಟುಂಬದ ವ್ಯಕ್ತಿಗಳು ಉತ್ಪಾದಕ ಬಾಬು ಗಳಿಗಾಗಿ ಸೇ. 4ರ ಬಡ್ಡಿ ದರದಲ್ಲಿ ಬ್ಯಾಂಕ್ ಸಾಲವನ್ನು ಈ ಯೋಜನೆಯನ್ವಯ ಪಡೆಯಲು ಅರ್ಹರು. ಅಂಥ ವ್ಯಕ್ತಿಗಳು ಭೂರಹಿತರಾಗಿರಬೇಕು. ಇಲ್ಲವೇ, ಭೂಮಿ ಯನ್ನು ಹೊಂದಿದ್ದಲ್ಲಿ, ನೀರಾವರಿ ಭೂಮಿಯಾದರೆ 1 ಎಕರೆಗಿಂತಲೂ ನೀರಾವರಿಯಿಲ್ಲದ ಭೂಮಿಯಾದರೆ 2½ ಎಕರೆಗಳಿಗಿಂತಲೂ ಹೆಚ್ಚು ಭೂಮಿಯನ್ನು ಹೊಂದಿರ ಬಾರದು. ಈ ಯೋಜನೆಯನ್ವಯ ನೀಡುವ ಸಾಲದ ಪರಮಾವಧಿ ಮೊಬಲಗು ರೂ. 6,500.

### ಉದರಿ ನೀತಿ: ರಿಸರ್ವ್ ಬ್ಯಾಂಕ್ ಗವರ್ನರ ದೃಷ್ಟಿ

ಮುಂದುವರಿಯುತ್ತಿರುವ ಹಣದುಬ್ಬರದ ಒತ್ತಡಗಳ ಹಿನ್ನೆಲೆಯಲ್ಲಿ ಮತ್ತು 1980–81ರಲ್ಲಿ ಆರಂಭವಾದ ಆರ್ಥಿಕ ಚೇತರಿಕೆಯನ್ನು ಉಳಿಸಿಕೊಳ್ಳುವ ದೃಷ್ಟಿಯಿಂದ, ಸಾಲ ನೀಡಿಕೆಯ ನೀತಿಯ ಹಿಂದಿನ ಧೋರಣೆ ಎಂಥದಾಗಿರ ಬೇಕು ಎಂಬುದನ್ನು ರಿಸರ್ವ್ ಬ್ಯಾಂಕಿನ ಗವರ್ನರ್ ಐ. ಜಿ. ಪಟೇಲ್ ಅವರು ಮುಂಬೈಯಲ್ಲಿ ಮಾರ್ಚ್ 17ರಂದು ನಡೆದ ಪ್ರಧಾನ ಅನುಸೂಚಿತ ವಾಣಿಜ್ಯ ಬ್ಯಾಂಕುಗಳ ಮುಖ್ಯ ಆಡಳಿತಗಾರರ ಸಭೆಯಲ್ಲಿ ವಿವರಿಸಿದರು. ಅದು ಬೆಲೆಯಲ್ಲಿ ಸ್ಥಿರತೆಯನ್ನು ಸಾಧಿಸುವಂಥದೂ ಹಾಗೆಯೇ ರಾಷ್ಟ್ರೀಯ ವರಮಾನದಲ್ಲಿ ಯೋಜನಾಬದ್ಧ ಬೆಳವಣಿಗೆಗೆ ಇಂಬುಕೊಡುವಂಥದೂ ಆಗಿರಬೇಕೆಂದು ಅವರು ಒತ್ತಿ ಹೇಳಿದರು.

### ಸಗಣಿ ಅನಿಲ ಸ್ಥಾವರಕ್ಕೆ ಬ್ಯಾಂಕ್ ನೆರವು

ಆರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಸಗಣಿ ಅನಿಲ ಉತ್ಪಾದನೆಗೆ ಹೆಚ್ಚಿನ ಮಹತ್ವ ನೀಡಲಾಗಿದೆ. ವಾಣಿಜ್ಯ ಬ್ಯಾಂಕುಗಳು ಮತ್ತು ಸಹಕಾರಿ ಬ್ಯಾಂಕುಗಳು ಸಗಣಿ ಅನಿಲ ಸ್ಥಾವರಗಳ ಸ್ಥಾಪನೆಗೆ ಹಣಕಾಸಿನ ನೆರವು ನೀಡಲು ಮಾರ್ಗದರ್ಶಕ ಸೂತ್ರಗಳನ್ನು ರೂಪಿಸಲಾಗಿದೆ. ಇಂಥ ಸ್ಥಾವರಗಳಿಗೆ ನೀಡಲಾಗುವ ಸಾಲವು ಠೇವಣಿ ವಿಮೆ ಮತ್ತು ಋಣ ಖಾತರಿ ನಿಗಮದ (ಡಿಪಾಸಿಟ್ ಇನ್ಶೂರೆನ್ಸ್ ಅಂಡ್ ಗ್ಯಾರಂಟಿ ಕಾರ್ಪೊರೇಷನ್: ಡಿಐಸಿಜಿಸಿ) ಖಾತರಿಯ ವ್ಯಾಪ್ತಿಗೆ ಒಳಪಡುತ್ತದೆ.

### ಆಫ್ರಿಕದ ಅಲ್ಪಾದಾಯ ದೇಶಗಳು

ಪೂರ್ವ ಮತ್ತು ದಕ್ಷಿಣ ಆಫ್ರಿಕದ ಅಲ್ಪ ಆದಾಯದ ದೇಶಗಳ ಕಳೆದ ಮೂರು ದಶಕಗಳ ಆರ್ಥಿಕ ಅಭಿವೃದ್ಧಿಯ ಬಗ್ಗೆ ವಿಶ್ವ ಬ್ಯಾಂಕ್ ಸಮೀಕ್ಷೆಯೊಂದನ್ನು ನಡೆಸಿದೆ. 1977 ರಲ್ಲಿ ವೈಯಕ್ತಿಕ ಸರಾಸರಿ ಆದಾಯ 300 ಡಾಲರ್‌ಗಳು ಇದ್ದ ದೇಶಗಳನ್ನು ಅದು ಈ ಸಮೀಕ್ಷೆಗೆ ತೆಗೆದುಕೊಂಡಿತ್ತು. ಕಳೆದ ಮೂರು ದಶಕಗಳ ಅಭಿವೃದ್ಧಿ ತೃಪ್ತಿಕರವಾಗಿಲ್ಲ ವೆಂದೂ ಈಗಿನ ಪರಿಸ್ಥಿತಿಗಳ ಆಧಾರದಿಂದ ಹೇಳುವುದಾದರೆ ಮುಂದಿನ ಎರಡು ದಶಕಗಳಲ್ಲಿ ಈ ದೇಶಗಳು ಆರ್ಥಿಕವಾಗಿ ಅನೇಕ ಸವಾಲುಗಳನ್ನು ಎದುರಿಸಬೇಕಾಗಬಹುದು ಎಂದೂ ಆ ಸಮೀಕ್ಷೆ ತಿಳಿಸಿದೆ.

### ಅತಿ ದೊಡ್ಡ ಜಲ ವಿದ್ಯುತ್ ಯೋಜನೆ

ಬ್ರಜಿಲ್ ಮತ್ತು ಪರಗ್ವೇ ದೇಶಗಳ ಗಡಿಯಲ್ಲಿ ಸ್ಥಾಪಿಸ ಲಾಗಿರುವ ಇಟೈಪು ಕಟ್ಟೆ 12,600 ಮೆಗಾವಾಟ್‌ಗಳ ವಿದ್ಯುತ್ ಉತ್ಪಾದನೆ ಮಾಡುವ, ಜಗತ್ತಿನ ಅತಿ ದೊಡ್ಡ ಜಲವಿದ್ಯುದಾಗಾರ. ಇದರಿಂದ ಉತ್ಪಾದನೆಯಾಗುವ ವಿದ್ಯುತ್ತು ನೈಋತ್ಯ ಬ್ರಜಿಲ್‌ನ ಕೈಗಾರಿಕಾ ಮೂಲಗಳ ವಿಕಾಸಕ್ಕೂ ಪರಗ್ವೇಯಲ್ಲಿ ಕೈಗಾರಿಕಾ ಪ್ರಗತಿಯ ಆರಂಭಕ್ಕೂ ಕಾರಣವಾಗಿದೆ. ಈ ಯೋಜನೆಗೆ ತಗಲಿದ ವೆಚ್ಚದ ಹಣ ವನ್ನು 15 ದೇಶಗಳ ಒಟ್ಟು 21 ಬ್ಯಾಂಕುಗಳು ಒದಗಿಸಿವೆ.

ಏಷ್ಯದ ರಾಷ್ಟ್ರಗಳಾದ ಭಾರತ, ಬಂಗ್ಲಾದೇಶ, ಪಾಕಿಸ್ತಾನ, ಶ್ರೀ ಲಂಕಾ, ಇಂಡೋನೇಷಿಯ, ಫಿಲಿಫೀನ್ಸ್, ಥೈಲೆಂಡ್ ಮತ್ತು ನೇಪಾಳ, ಮತ್ತು ಮಧ್ಯ ಮತ್ತು ದಕ್ಷಿಣ ಅಮೆರಿಕ ಖಂಡಗಳ ರಾಷ್ಟ್ರಗಳಾದ ಹೈಟಿ, ಹಾಂಡುರಾಸ್, ನಿಕರಾಗ್ವ ಮತ್ತು ಆಂಡಿಯನ್ ಸಮೂಹ ಇವುಗಳಲ್ಲಿ ಆಹಾರೋತ್ಪಾ ದನೆಗೆ ನೆರವಾಗುವ ಸೌರಶಕ್ತಿಯ ಅಭಿವೃದ್ಧಿ, ಕೃಷಿ ಸಂಶೋ ಧನೆ, ನೀರಾವರಿ ಮತ್ತು ಗ್ರಾಮೀಣ ಯೋಜನೆಗಳಿಗಾಗಿ ಐರೋಪ್ಯ ಆರ್ಥಿಕ ಸಮುದಾಯ 10.3 ಕೋಟಿ ಯೂರೋ ಪಿಯನ್ ಆರ್ಥಿಕ ಏಕಮಾನಗಳಷ್ಟು ನೆರವನ್ನು ನೀಡಿದೆ.

## HELPING THE SMALL MAN

## **IN A BIG WAY**

Over 330 schemes to help different groups in different geographical regions. Every scheme aimed at a distinct group, living in a distinct area, fulfilling their distinct needs.

Syndicate Bank, in rendering assistance to different sections in the priority sector, has deeply and intimately studied their lives, evolved plans to initiate them into productive activity and taken steps to generate rural employment.

Over 500 thousand beneficiaries in priority sectors owe their economic development to Syndicate Bank.

# **SYNDICATE BANK**

***The Bank That Goes to People***

# C. A. Willner & Co. Pvt. Ltd.

Head Office :

**15, Richmond Road, Bangalore-560 025**

Telex : (0845) 8041 WICO IN    Telegram : " LAPLATA "
Telephone : 50294

*Branches:*

P-105, 'E' Block F, New Alipore, Calcutta-700 053
Phone : 450660  Grams : " WILLNERCO "

D-66, Defence Colony, New Delhi-110 024
Phone : 697639  Grams : " LAPLATA "

*Authorised Representatives of :*

West German, U.K. Firms Manufacturing CNC Lathes, Copy Milling Machines, Precision Surface and Profile Grinding Machines, Vacuum Pumps, Systems, Furnaces and Accessories, Autoclaves, Centrifugal & Reciprocating Chemical Pumps, Hydraulic & Electrical Dynamometers and Foundry Equipments and Plants

# ಪಾರಿಭಾಷಿಕ ಶಬ್ದಕೋಶ

ಮ. ನಾ. ಕುಲಕರ್ಣಿ
ಜಿ. ಎನ್. ನರಸಿಂಹಮೂರ್ತಿ

**Agency :** (ಅ) ಅಭಿಕರಣ. ಏಜೆನ್ಸಿ. (ಆ) ಅಭಿಕರಣ ಕ್ಷೇತ್ರ.
(ಅ) ಅಭಿಕರ್ತೃ ಅಥವಾ ಏಜೆಂಟನೊಬ್ಬನ ಕಾರ್ಯಭಾರ ಅಥವಾ ಅಧಿಕಾರ. (ಆ) ಅಭಿಕರ್ತೃ ಅಥವಾ ಏಜೆಂಟನೊಬ್ಬನ ಅಧಿಕಾರ ವ್ಯಾಪ್ತಿಗೆ ಸೇರಿದ ಪ್ರದೇಶ ಅಥವಾ ಕ್ಷೇತ್ರ.

**Agenda :** ಕಾರ್ಯಸೂಚಿ. ಸಭೆಯಲ್ಲಿ ನಡೆಸಬೇಕಾದ ಕಲಾಪಗಳ ಪಟ್ಟಿ.

**Agent :** ಅಭಿಕರ್ತ, ಏಜೆಂಟ್. ಇನ್ನೊಬ್ಬನ ಪರವಾಗಿ ಕಾರ್ಯ ಪ್ರವೃತ್ತನಾಗಲು ಅಥವಾ ವರ್ತಿಸಲು ಅಥವಾ ಇನ್ನೊಬ್ಬನನ್ನು ಪ್ರತಿನಿಧಿಸಲು ನೇಮಕವಾದ ವ್ಯಕ್ತಿ (ಭಾರತೀಯ ಕರಾರು ಅಧಿನಿಯಮದ 10ನೆಯ ಅಧ್ಯಾಯದ 182ನೆಯ ಪ್ರಕರಣ). ಭಾರತದಲ್ಲಿ ಕೆಲವು ಬ್ಯಾಂಕುಗಳಲ್ಲಿ ಶಾಖಾ ಮುಖ್ಯರನ್ನು ಹಿಂದೆ 'ಏಜೆಂಟ್' ಎಂದು ಕರೆಯಲಾಗುತ್ತಿತ್ತು. ಈಗ ಅವರನ್ನು ಮ್ಯಾನೇಜರ್' ಎಂದು ಕರೆಯಲಾಗುತ್ತದೆ.

**Agio :** (ಅ) ವಟ್ಟ. ಪರಿವರ್ತನವ್ಯವಹಾರ. ಒಂದು ದೇಶದ ನಾಣ್ಯವನ್ನು ಇನ್ನೊಂದು ದೇಶದ ನಾಣ್ಯಕ್ಕೆ ಪರಿವರ್ತಿಸಲು ಅಥವಾ ಅದನ್ನು ವಿನಿಮಯ ಮಾಡಲು ವಿಧಿಸುವ ಶುಲ್ಕ. ಸಾಮಾನ್ಯವಾಗಿ ಇದನ್ನು ಶೇಕಡವಾಗಿ ನಮೂದಿಸಲಾಗುತ್ತದೆ. (ಆ) ಮೌಲ್ಯಾಂತರ. ಯಾವುದೇ ಕಾರಣದಿಂದಾಗಿ ಒಂದು ನಾಣ್ಯ ಅಥವಾ ಕರೆನ್ಸಿಯ ಮೌಲ್ಯದ ಇಳಿತ ಅಥವಾ ತೇಮಾನ, ಸವಕಳಿ ಅಥವಾ ಕರಡು ಉದಾಗ (ಡಿಪ್ರೀಸಿಯೇಷನ್) ಅದರ ನಾಮಮಾತ್ರ ಮೌಲ್ಯಕ್ಕೂ (ನಾಮಿನಲ್ ವ್ಯಾಲ್ಯೂ) ವಾಸ್ತವ ಮೌಲ್ಯಕ್ಕೂ (ಆಕ್ಚ್ಯುಯಲ್ ವ್ಯಾಲ್ಯೂ) ಇರುವ ವ್ಯತ್ಯಾಸವನ್ನು ಏಜಿಯೋ ಎಂದು ಕರೆಯುವುದುಂಟು.

**Agricultural Bank :** ಕೃಷಿ ಬ್ಯಾಂಕ್. ಕೃಷಿಕರಿಗೆ ಹೆಚ್ಚು ಸೌಲಭ್ಯಗಳನ್ನು ನೀಡುವ, ಕೃಷಿಕರಿಗಾಗಿಯೇ ರೂಪಿತವಾದ ಸಾಲ ಯೋಜನೆಗಳನ್ನು ಹೊಂದಿರುವ ಬ್ಯಾಂಕ್. ವಾಣಿಜ್ಯ ಬ್ಯಾಂಕು ವಾಡಿಕೆಯಾಗಿ ನೀಡುವ ಸಾಲದ ಅವಧಿಗಿಂತ ದೀರ್ಘವಾದ ಅವಧಿಯ ಸಾಲಗಳನ್ನು ಸಾಮಾನ್ಯವಾಗಿ ಇದು ನೀಡುತ್ತದೆ.

**Agricultural Credit :** ಕೃಷಿ ಉದರಿ. ಕೃಷಿ ಸಂಬಂಧ ಚಟುವಟಿಕೆಗಳಿಗಾಗಿ ನೀಡುವ ಸಾಲ, ಉದರಿ.

**Agricultural Holding :** ಕೃಷಿ ಹಿಡುವಳಿ ಜಮೀನು.

**Agricultural Bill :** ಕೃಷಿ ಹುಂಡಿ. ವ್ಯವಸಾಯೋಪಯೋಗಿಯಾದ, ವ್ಯವಸಾಯೋತ್ಪನ್ನಗಳಿಗೆ ಸಂಬಂಧಿಸಿದ ಹುಂಡಿ.

**Agricultural Credit Department (ACD) :** ಕೃಷಿ ಉದರಿ ವಿಭಾಗ. ಭಾರತೀಯ ರಿಸರ್ವ್ ಬ್ಯಾಂಕಿನ ಒಂದು ವಿಭಾಗ. 1935ರಲ್ಲಿ ಈ ವಿಭಾಗ ಸ್ಥಾಪನೆಯಾಯಿತು. ಕೃಷಿಗೆ ಸಂಬಂಧಿಸಿದ ನಾನಾ ವಿಷಯಗಳನ್ನು ನೋಡಿಕೊಳ್ಳುವ ವಿಭಾಗ.

**Agricultural Economics :** ಕೃಷಿ ಅರ್ಥಶಾಸ್ತ್ರ.

**Agricultural Income-tax :** ಕೃಷಿ ವರಮಾನ ತೆರಿಗೆ.

**Agricultural Insurance :** ಕೃಷಿ ವಿಮೆ. ವ್ಯವಸಾಯ ವಿಮೆ.

**Agricultural Refinance & Development Corporation (ARDC) :** ಕೃಷಿ ಮರು ಹಣಕಾಸು ಮತ್ತು ಅಭಿವೃದ್ಧಿ ನಿಗಮ. 1963ರಲ್ಲಿ ಭಾರತೀಯ ರಿಸರ್ವ್ ಬ್ಯಾಂಕಿನ ಅಂಗ ಸಂಸ್ಥೆಯಾಗಿ ಪ್ರಾರಂಭವಾದ ನಿಗಮ. ಕೃಷಿ ಅಭಿವೃದ್ಧಿಗೆ ವಿಶೇಷವಾಗಿ ದೀರ್ಘಾವಧಿ ಸಾಲವನ್ನು ಭೂ ಅಭಿವೃದ್ಧಿ ಬ್ಯಾಂಕುಗಳ ಮೂಲಕ ಒದಗಿಸುವ ಅಭಿವೃದ್ಧಿ ಬ್ಯಾಂಕು.

**Allonge :** ಅನುಪರ್ಣ. ಅನೇಕ ಜನರ ಹಸ್ತಾಂತರಣದಿಂದಾಗಿ ಹಿಂಬರಹಗಳಿಂದ ಹುಂಡಿಯ ಹಿಂಬದಿ ತುಂಬಿಹೋದಾಗ, ಮುಂದಿನ ಹಿಂಬರಹಗಳಿಗಾಗಿ ಲಗತ್ತಿಸಲಾದ ಕಾಗದ. ಹುಂಡಿಯ ಮೇಲಣ ಕೊನೆಯ ಹಿಂಬರಹವನ್ನು ಅದರ ಒಂದು ಭಾಗ ಈ ಕಾಗದದ ಮೇಲೂ ಬರುವಂತೆ ಬರೆಯಲಾಗುತ್ತದೆ. ಅನಂತರದ ಹಿಂಬರಹಗಳನ್ನು ಅನುಪರ್ಣಿಯ ಮೇಲೇ ಬರೆಯಬಹುದು. ಅನುಪರ್ಣವನ್ನು ಹುಂಡಿಯ ಒಂದು ಭಾಗವಾಗಿ ಪರಿಗಣಿಸುವುದರಿಂದ ಹೆಚ್ಚಿನ ಸ್ಟಾಂಪಿನ ಅವಶ್ಯಕತೆ ಇರುವುದಿಲ್ಲ.

**Allotment :** ಹಂಚಿಕೆ, ನೀಡಿಕೆ.

**Allotment Letter :** ಹಂಚಿಕೆ ತಿಳಿವಳಿಕೆ ಪತ್ರ.

**Allotment Note :** ವೇತನಾಂಶ ಪತ್ರ. ಸೇನೆ, ನೌಕೆ, ವ್ಯಾಪಾರ ಹಡಗು ಮುಂತಾದುವುಗಳ ಸಿಬ್ಬಂದಿಯವರು ಅಥವಾ ಇತರ ಸಿಬ್ಬಂದಿಯವರು ತಮ್ಮ ಇಡೀ ಸಂಬಳವನ್ನು ಅಥವಾ ಅದರ ಒಂದು ಭಾಗವನ್ನು ತಮ್ಮ ಕುಟುಂಬದವರಿಗೆ ಪಾವತಿ ಮಾಡುವಂತೆ ಆದೇಶಿಸಿ ತಮ್ಮ ನೇಮಕದಾರರಿಗೆ ಬರೆದ ಪತ್ರ.

**Allottee :** ಹಂಚಿಕೆ ಪಡೆದವನು.

**Alloy :** ಮಿಶ್ರಲೋಹ. ಚಲಾವಣೆಯಲ್ಲಿರುವ ನಾಣ್ಯಗಳೆಲ್ಲ ಮಿಶ್ರಲೋಹಗಳೇ. ಚಿನ್ನ ಹಾಗೂ ಬೆಳ್ಳಿಯ ನಾಣ್ಯಗಳಲ್ಲಿ ಕೂಡ ಕೆಲ ಅಂಶ ತಾಮ್ರ ಇರುತ್ತದೆ. ಅಪ್ಪಟ ಚಿನ್ನ ಅಥವಾ ಬೆಳ್ಳಿಯಲ್ಲಿ ನಾಣ್ಯಕ್ಕೆ ಬೇಕಾದ ದೃಢತೆ ಇರುವುದಿಲ್ಲ.

**Alteration :** ಬದಲಾವಣೆ. (ಅ) ಬ್ಯಾಂಕಿನ ಪುಸ್ತಕಗಳಲ್ಲಿ ಪ್ರಮಾದವಶಾತ್ ಆದ ತಪ್ಪನ್ನು ತಿದ್ದಬೇಕಾದ ಸಂದರ್ಭದಲ್ಲಿ ತಪ್ಪನ್ನು ಪೂರ್ತಿ ಹೊಡೆದು ಹಾಕಿ ಸರಿಯಾದುದನ್ನು ಕೊಂಚ ಮೇಲೆ ಅಥವಾ ಕೆಳಗೆ ಬರೆಯಬೇಕು. ಬದಲಾವಣೆ ಮಾಡಿದವರ ಆದ್ಯಕ್ಷರ ಅಥವಾ ಪೂರ್ತಿ ಸಹಿಯ ಮೂಲಕ ಬದಲಾವಣೆಯನ್ನು ದೃಢೀಕರಿಸಬೇಕು. (ಆ) ಸಾರ್ವಜನಿಕರಿಗೆ ಕೊಡುವ ಯಾವುದೇ ದಾಖಲೆಯಲ್ಲಾಗಲಿ (ಪಾಸ ಜಮಾ ರಸೀತಿ, ಸಾವಧಿ ಠೇವಣಿ ರಸೀತಿ ಇತ್ಯಾದಿ) ಬದಲಾವಣೆಗಳಿರಕೂಡದು. (ಇ) ಹುಂಡಿ ಪತ್ರದಲ್ಲಿಯ ಬದಲಾವಣೆಗಳ ಅಡಿಯಲ್ಲಿ ಅದರ ರಚಕನ ಪೂರ್ಣ ಸಹಿ ಇರಬೇಕು. ಆದ್ಯಕ್ಷರಗಳಿದ್ದರೆ ದುರುಪಯೋಗಕ್ಕೆ ದಾರಿ ಮಾಡಿಕೊಡುತ್ತದೆ ಎಂಬ ಕಾರಣದಿಂದ ಚೆಕ್ಕು ಮತ್ತು ಹುಂಡಿಗಳ ಕೆಲವು ಮುಖ್ಯ ಬದಲಾವಣೆಗಳನ್ನು ಸಾರಭೂತ (ಮಟೀರಿಯಲ್) ಎಂದು ಪರಿಗಣಿಸಿ ಅವಕ್ಕೆ ರಚಕನ ಪೂರ್ಣ ಸಹಿ ಇರಬೇಕೆಂದು ನಿಯಮ ಮಾಡಲಾಗಿದೆ.

**Material Alteration :** ಸಾರಭೂತ ಬದಲಾವಣೆಗಳು. ಚೆಕ್ಕಿನ ದಿನಾಂಕ, ಪಾವತಿಯಾಗಬೇಕಾದ ಮೊಬಲಗು, ಹುಂಡಿ ಯಾದರೆ ಅದರ ಗಡುವು, ಪಾವತಿಯಾಗುವ ಸ್ಥಳ, ಇವುಗಳ ಬದಲಾವಣೆಗಳನ್ನು ಸಾರಭೂತವೆಂದು ಪರಿಗಣಿಸಲಾಗಿದೆ.

**Alternate Director :** ಪರ್ಯಾಯ ನಿರ್ದೇಶಕ. ಸಂಸ್ಥೆಯ ವಿಧಿಗಳಲ್ಲಿ ಅವಕಾಶವಿದ್ದಲ್ಲಿ ಒಬ್ಬ ನಿರ್ದೇಶಕ ತನ್ನ ಬದಲಿಗೆ ತಾತ್ಕಾಲಿಕವಾಗಿ ಸೂಚಿಸಿದವನು. ಇವನ ಕೃತಿಗಳಿಗೆ ಸಂಸ್ಥೆ ಬದ್ಧವಾಗಿರುತ್ತದೆ. ಅಧಿನಿಯಮಗಳಲ್ಲಿ ನಮೂದಿಸದಿದ್ದರೆ ಬದಲಿ ನಿರ್ದೇಶಕನಿಗೆ ಯಾವ ರೀತಿಯ ಸಂಭಾವನೆಯನ್ನೂ ಸಂಸ್ಥೆ ಕೊಡಬೇಕಾಗಿಲ್ಲ.

**Alternate Drawee :** ಪರ್ಯಾಯ ಆದೇಶಿತ.

**Alternate Payee :** ಪರ್ಯಾಯ ಪ್ರಾಪ್ತಿಕರ್ತ.

**Amalgamation :** ಸಮಾಮೇಲನ

**Amortisation :** ಋಣವಿಮೋಚನ. ಪ್ರತಿ ವರ್ಷ ಬಾಂಡುಗಳ ಹಣವನ್ನು ಅದರ ಪಾವತಿಗಾಗಿಯೇ ನಿರ್ಮಿಸಿರುವ ಋಣವಿಮೋಚನಾ ನಿಧಿಯಿಂದ ಪಾವತಿ ಮಾಡುವುದು.

**Amount of Bill or Cheque :** ಹುಂಡಿ ಅಥವಾ ಚೆಕ್ಕಿನ ಮೊಬಲಗು. ಇದು ನಿರ್ದಿಷ್ಟವಾಗಿರಬೇಕು. ಇದನ್ನು ಚೆಕ್ಕಾದರೆ (ಅದರ ಒಡಲಿನ) ನಡುಭಾಗದಲ್ಲಿ, ಹುಂಡಿಯಾದರೆ ಸಾಮಾನ್ಯವಾಗಿ ಅದರ ಮೇಲ್ಭಾಗದ ಎಡಮೂಲೆಯಲ್ಲಿ ಕಾಣಿಸಿರುತ್ತಾರೆ. ಕಾನೂನಿನನ್ವಯ ಅಕ್ಷರ, ಅಂಕಿ ಎರಡರಲ್ಲೂ ಚೆಕ್ಕಿನ ಮೇಲೆ ಬರೆಯುವುದು ಕಡ್ಡಾಯವಲ್ಲದಿದ್ದರೂ ರೂಢಿಯಲ್ಲಿ ಅಕ್ಷರಗಳಲ್ಲಿ ಮೊಬಲಗನ್ನು ಬರೆಯದೆ ಇದ್ದ ಚೆಕ್ಕುಗಳನ್ನು ವಾಪಸು ಮಾಡುತ್ತಾರೆ. ಭಾರತೀಯ ಬ್ಯಾಂಕುಗಳ ಸಂಘದ (ಐ.ಬಿ.ಎ.) ಆದೇಶದಂತೆ, ಅಕ್ಷರದಲ್ಲಿರುವ ಮೊಬಲಗನ್ನು ಪಾವತಿ ಮಾಡಬೇಕು. ಅಕ್ಷರದಲ್ಲಿರುವ ಮೊಬಲಗೇ ಆ ಪರಕ್ರಾಮ್ಯ ಸಂಲೇಖದ (ನೆಗೋಷಿಯಬಲ್ ಇನ್‌ಸ್ಟ್ರುಮೆಂಟ್) ಮೊಬಲಗೆಂದು ಕಾನೂನು ಹೇಳುತ್ತದೆ.

**Amounts Differ :** ಮೊಬಲಗುಗಳಲ್ಲಿ ವ್ಯತ್ಯಾಸ. ಅಕ್ಷರ ಮತ್ತು ಅಂಕಿಗಳಲ್ಲಿನ ಮೊಬಲಗುಗಳಲ್ಲಿ ವ್ಯತ್ಯಾಸವಿದ್ದಲ್ಲಿ ಅಂಥ ಹುಂಡಿ ಅಥವಾ ಚೆಕ್ಕನ್ನು ಪಾವತಿ ಮಾಡುವುದಿಲ್ಲ. 'ಮೊಬಲಗುಗಳಲ್ಲಿ ವ್ಯತ್ಯಾಸವಿದೆ' ಎಂಬ ಟಿಪ್ಪಣಿಯೊಡನೆ ಅಂಥ ಹುಂಡಿ

ಅಥವಾ ಚೆಕ್ಕನ್ನು ಪ್ರಾಪ್ತಿಕರ್ತನಿಗೆ (ಪೇಯೀ) ವಾಪಸು ಕಳಿಸಲಾಗುತ್ತದೆ. ಭಾರತೀಯ ಬ್ಯಾಂಕುಗಳ ಸಂಘದ ಆದೇಶದಂತೆ, ಅಕ್ಷರದಲ್ಲಿರುವ ಮೊಬಲಗನ್ನು ಪಾವತಿ ಮಾಡಬೇಕು.

**And Reduced :** ಮತ್ತು ಇಳಿಸಲ್ಪಟ್ಟದ್ದು. ನ್ಯೂನೀಕೃತ. ಯಾವುದೇ ಕಂಪನಿ ತನ್ನ ಷೇರು ಬಂಡವಾಳವನ್ನು ಕಡಿಮೆ ಮಾಡಿಕೊಂಡಲ್ಲಿ, ಅಂಥ ಕಂಪನಿ ತನ್ನ ಹೆಸರಿನ ಕೊನೆಯಲ್ಲಿ ' ಪರಿಮಿತ ' ಅಥವಾ 'ನಿಯಮಿತ' ಎಂಬ ಪದದ ಜೊತೆಗೆ ಈ ಪದವನ್ನೂ, ನಿಗದಿ ಮಾಡುವ ಅವಧಿಯವರೆಗೆ, ಸೇರಿಸತಕ್ಕದ್ದು ಎಂದು ನ್ಯಾಯಾಲಯ ನಿರ್ದೇಶಿಸುತ್ತದೆ. ಆ ಕಂಪನಿಯ ವಾರ್ಷಿಕ ಪತ್ರಗಳಲ್ಲಿ ನಮೂದಾಗಿರುವ ಅಂಕಿ-ಅಂಶಗಳ ಆಧಾರದ ಮೇಲೆ ಸಾಲ ನೀಡುವ ಬ್ಯಾಂಕಿಗೂ, ಕಂಪನಿಯೊಡನೆ ವ್ಯವಹಾರ ಮಾಡುವ ಸಾರ್ವಜನಿಕರಿಗೂ ಇದು ಎಚ್ಚರಿಕೆಯ ಸೂಚನೆ.

**Answers :** (ಬ್ಯಾಂಕರನ) ಉತ್ತರಗಳು. ಚೆಕ್ಕು ಅಥವಾ ಹುಂಡಿಯನ್ನು ಪಾವತಿ ಮಾಡದೆ ಬ್ಯಾಂಕು ಹಿಂದಿರುಗಿಸುತ್ತಿರುವುದರ ಕಾರಣಗಳು. ಈ ಕಾರಣಗಳು ಅವಾಸ್ತವವಾಗಿರಬಾರದು. ಕೆಲವು ಉತ್ತರಗಳು: 'ಅಂಕಿ ಮತ್ತು ಅಕ್ಷರಗಳಲ್ಲಿ ಮೊಬಲಗು ಬೇರೆಬೇರೆಯಾಗಿದೆ.' 'ಚೆಕ್ಕು ವಿಕೃತಗೊಂಡಿದೆ.' 'ಹಣ ಪಾವತಿ ಮಾಡಬಾರದೆಂದು ಆದೇಶವಿದೆ.'

**Ante-dated :** ಗತದಿನಾಂಕಿತ. ಚೆಕ್ಕನ್ನು ಅಥವಾ ಹುಂಡಿಯನ್ನು ಬರೆಯುತ್ತಿರುವ ದಿನಕ್ಕಿಂತ ಹಿಂದಿನ ದಿನಾಂಕವನ್ನು ಅದರ ಮೇಲೆ ನಮೂದಿಸಿದರೆ ಅದು ಗತದಿನಾಂಕಿತ ಚೆಕ್ಕು. ಇದು ಸ್ವಷ್ಟನೆಗೆ ಸಮವಾಗಬಲ್ಲದು. ಆದರೂ ಈ ಕಾರಣಕ್ಕಾಗಿ ಹುಂಡಿ ಅಥವಾ ಚೆಕ್ಕು ಅಸೂರ್ಜಿತವಾಗುವುದಿಲ್ಲ. ನಮೂದಿಸಿರುವ ದಿನಾಂಕವನ್ನೇ ಅದರ ದಿನಾಂಕವೆಂದು ಪರಿಗಣಿಸಲಾಗುತ್ತದೆ. ಅಂದಿನಿಂದಲೇ ಅದರ ಅವಧಿಯ ಲೆಕ್ಕ ಹಾಕಲಾಗುತ್ತದೆ.

**Application for Shares :** ಷೇರುಗಳಿಗಾಗಿ ಅರ್ಜಿ. ಸಾರ್ವಜನಿಕರು ಸಂಸ್ಥೆಗಳ ಷೇರುಗಳನ್ನು ಕೊಳ್ಳಲು ಬಯಸಿದಾಗ ಅದರ ಸಲುವಾಗಿ ಸಲ್ಲಿಸಬೇಕಾದ ಅರ್ಜಿ. ಸಂಸ್ಥೆಯ ಬಂಡವಾಳ, ಲಾಭಾಂಶ ಮುಂತಾದ ವಿವರಗಳನ್ನುಳ್ಳ ಪರಿಚಯ ಪುಸ್ತಕವೊಂದು ಈ ಅರ್ಜಿಯ ಸಂಗಡ ಇರುತ್ತದೆ. ತಕ್ಕ ಮೊತ್ತದ ಹಣವನ್ನು ಅರ್ಜಿಯೊಂದಿಗೆ ಸಲ್ಲಿಸಿದ ಅನಂತರ, ಅರ್ಜಿ ಸ್ವೀಕೃತವಾದಲ್ಲಿ, ಅರ್ಜಿದಾರರಿಗೆ ಷೇರುಗಳನ್ನು ಹಂಚಲಾಗುತ್ತದೆ.

**Application Form :** ಅರ್ಜಿ ನಮೂನೆ.

**Application Money:** ಅರ್ಜಿಯ ಹಣ. ಅರ್ಜಿಯೊಂದಿಗೆ ಸಾಮಾನ್ಯವಾಗಿ (ಕಂಪನಿಯ ಷೇರುಗಳಿಗಾಗಿ) ಸಲ್ಲಿಸುವ ಹಣ.

**Appraiser :** ಮೌಲ್ಯನಿರ್ಣಾಯಕ. ಶುಲ್ಕವನ್ನು ಪಡೆದು ಯಾವುದೇ ತರಹೆಯ ಆಸ್ತಿಪಾಸ್ತಿಯ ಬೆಲೆಯನ್ನು ಕಟ್ಟುವವ.

**Appropriated Stamps :** ವಿನಿಯೋಜಿತ ಸ್ಟಾಂಪುಗಳು. ಯಾವುದೇ ಸ್ಟಾಂಪು ಅಥವಾ ಸ್ಟಾಂಪುಗಳು ತಮ್ಮ ಮೇಲಿನ ಪದ ಅಥವಾ ಪದಗಳಿಂದ ಯಾವುದಾದರೊಂದು ದಾಖಲೆಗೋಸ್ಕರ ವಿನಿಯೋಜಿತವಾಗಿದ್ದರೆ, ಅಂಥ ಸ್ಟಾಂಪು ಅಥವಾ ಸ್ಟಾಂಪುಗಳನ್ನು ಬೇರಾವ ದಾಖಲೆಗೂ ಉಪಯೋಗಿಸಬಾರದು. ಆ ಸ್ಟಾಂಪು/ಸ್ಟಾಂಪುಗಳು ಬೇರಾವ ದಾಖಲೆಯ ಉಪಯೋಗಕ್ಕೂ ಒದಗತಕ್ಕದ್ದಲ್ಲ.

**Appropriation Account :** ವಿನಿಯೋಗ ಖಾತೆ, ಲೆಕ್ಕ. ನಿವ್ವಳ ಲಾಭದ ವಿನಿಯೋಗವನ್ನು ತೋರಿಸುವ ಖಾತೆ.

**Appropriation Act :** ವಿನಿಯೋಗದ ಅಧಿನಿಯಮ. ಪ್ರತಿ ವರ್ಷಾಂತ್ಯದಲ್ಲಿ ಸರಕಾರ ಈ ಅಧಿನಿಯಮವನ್ನು ಹೊರಡಿಸುತ್ತದೆ. ಸಾರ್ವಜನಿಕ ನಿಧಿಯಿಂದ, ಅದನ್ನು ಸಂಗ್ರಹಿಸಿದ ಉದ್ದೇಶಗಳ ಪೂರೈಕೆಯ ಸಲುವಾಗಿ, ಹಣವನ್ನು ವಿನಿಯೋಗಿಸಲು ಸರಕಾರಕ್ಕೆ ಈ ಅಧಿನಿಯಮ ಅನುವು ಮಾಡಿಕೊಡುತ್ತದೆ.

**Appropriation of Goods :** ಸರಕುಗಳ ವಿನಿಯೋಗ. ಒಪ್ಪಂದದಲ್ಲಿರುವ ವಿವರಗಳಿಗನುಸಾರವಾಗಿ ಸರಕುಗಳನ್ನು ಬಳಸಿಕೊಳ್ಳುವ ಕಾರ್ಯ. ವ್ಯಾಪಾರ ಮೊದಲು ನಡೆದು, ಹಣ ಪಾವತಿಯಾಗಿ, ಸರಕುಗಳು ಅನಂತರ ದೊರೆಯುವ ಸಂದರ್ಭಗಳಲ್ಲಿ ನಡೆಯುವ ಕ್ರಿಯೆ.

**Appropriation of Payments :** ಸಂದಾಯಗಳ ವಿನಿಯೋಗ. ಗ್ರಾಹಕ ಹಣವನ್ನು ಯಾವ ಉದ್ದೇಶದ ಸಲುವಾಗಿ ಜಮ ಮಾಡಿರುತ್ತಾನೋ, ಆ ಉದ್ದೇಶವನ್ನು ಪೂರೈಸಲೋಸುಗವೇ ಬ್ಯಾಂಕು ಆ ಜಮೆಯನ್ನು ಉಪಯೋಗಿಸುತ್ತದೆ. ಉದಾಹರಣೆ: ಯಾವುದೇ ಹುಂಡಿಯ ಸಲುವಾಗಿ ಅಥವಾ ತಾನು ನೀಡಿರುವ ಚೆಕ್ಕಿನ ಮೇಲೆ ಹಣ ಪಾವತಿಗಾಗಿ ಗ್ರಾಹಕ ಹಣ ಜಮೆ ಮಾಡಿದರೆ, ಆ ಕಾರ್ಯಕ್ಕೆ ಮಾತ್ರ ಆ ಹಣವನ್ನು ವಿನಿಯೋಗಿಸಲಾಗುವುದು. ಒಂದು ವೇಳೆ ಯಾವ ಉದ್ದೇಶವೂ ಇಲ್ಲದೆ ಗ್ರಾಹಕ ಹಣ ಜಮೆ ಮಾಡಿದ್ದಲ್ಲಿ ಬ್ಯಾಂಕು ಆ ಜಮೆಯನ್ನು ಗ್ರಾಹಕನ ಋಣವನ್ನು ಕಡಿಮೆ ಮಾಡಲು ಉಪಯೋಗಿಸಬಹುದು. ಈ ರೀತಿಯ ವಿನಿಯೋಗವಿಲ್ಲದಿದ್ದಲ್ಲಿ ಕ್ಲೇಟನ್ ಪ್ರಕರಣದಂತೆ ಗ್ರಾಹಕನ ಖಾತೆಗೆ ಜಮೆ ಮಾಡಿ, ಆತ ಕಳುಹಿಸಬಹುದಾದ ಮೊದಲ ಚೆಕ್ಕಿನ ಪಾವತಿಯ ಸಲುವಾಗಿ ಹಣವನ್ನು ಬಳಸಬೇಕು. ನೋಡಿ: ಕ್ಲೇಟನ್ಸ್ ಕೇಸ್.

**Appurtenances :** ಉಪಬಂಧ. ಯಾವುದೇ ಆಸ್ತಿಯ ಜೊತೆಗೆ ಮುಂಬರಿಯುವ ವಸ್ತುಗಳು ಹಾಗೂ ಹಕ್ಕುಗಳು.

**Arbitrage :** ಅಂತರಪಣನ. ಹೆಚ್ಚಿಗೆ ದರವಿರುವ ಕೇಂದ್ರದಲ್ಲಿ ಮಾರಲೋಸುಗ, ಸುವರ್ಣ ಗಟ್ಟಿಗಳನ್ನು, ವಿದೇಶಿ ವಿನಿಮಯ ಸಾಲ ಪತ್ರಗಳನ್ನು ಕಡಿಮೆ ದರವಿರುವ ಕೇಂದ್ರದಿಂದ ಕೊಳ್ಳುವುದು.

**Arbitration :** ಪಂಚಾಯತಿ. ಮಧ್ಯಸ್ಥಿಕೆ. ವಿವಾದವಿರುವ ಸಂಗತಿಗಳನ್ನು ಇತ್ಯರ್ಥ ಮಾಡಲೋಸುಗ ಇರುವ ಮಧ್ಯಸ್ಥಿಕೆದಾರರ, ನಿರ್ಣಾಯಕರ, ಸಂಧಿವಿಗ್ರಹಿಗಳ ತೀರ್ಪಿಗೆ ವಿವಾದದ ಎರಡೂ ಕಡೆಯವರೂ ಬದ್ಧರಾಗಿರುತ್ತಾರೆ. ಅವರ ಲಿಖಿತ ತೀರ್ಪನ್ನು ಪಂಚಾಯತಿ ನಿರ್ಣಯ ಎಂದು ಕರೆಯುತ್ತಾರೆ.

**Arbitration of Exchange :** ವಿನಿಮಯ ತೀರುವೆ. ವಿನಿಮಯ ದರ ನಿಷ್ಕರ್ಷೆ. ಒಂದು ದೇಶದ ಬ್ಯಾಂಕಿನ ಸಾಲವನ್ನು ಮತ್ತೊಂದು ದೇಶದ ಹುಂಡಿಪತ್ರದ ಹಣದಿಂದ ತೀರಿಸುವಿಕೆ. ಒಟ್ಟು ಪಾವತಿ ಮಾಡಬೇಕಾದ ವಿವಿಧ ದೇಶಗಳ ಹಣವನ್ನು ಲಕ್ಷ್ಯದಲ್ಲಿಟ್ಟುಕೊಂಡು ಬೇರೆ ಕೇಂದ್ರದ ಹುಂಡಿಯಿಂದ ಅದನ್ನು ತೀರುವೆ ಮಾಡುವುದು. ಕೇವಲ ಒಂದು ಕೇಂದ್ರವನ್ನು ವಿನಿಮಯ ತೀರುವೆಗಾಗಿ ಬಳಸಿದರೆ ಅದು ಸರಳ ವಿನಿಮಯ ತೀರುವೆಯಾಗುತ್ತದೆ. ಹೆಚ್ಚು ಕೇಂದ್ರಗಳಿದ್ದರೆ ಅದು ಸಂಕೀರ್ಣ ವಿನಿಮಯ ತೀರುವೆಯಾಗುತ್ತದೆ. ಬ್ಯಾಂಕರುಗಳು ವಿನಿಮಯ ಲಾಭ ಗಳಿಸಲು ಇಂಥ ವ್ಯವಹಾರಗಳನ್ನು ನಡಸುತ್ತಾರೆ.

**Arrangement with Creditors, Arrangement with Members :** ಸಾಲಿಗರೊಂದಿಗೆ, ಸದಸ್ಯರೊಂದಿಗೆ ವ್ಯವಸ್ಥೆ. ವ್ಯಕ್ತಿ ತನ್ನ ಸಾಲಗಳನ್ನು ತೀರುವೆ ಮಾಡಲಾರದಾದಾಗ, ಸಾಲ ಕೊಟ್ಟವರೊಡನೆ ಮಾಡಿಕೊಳ್ಳುವ ವ್ಯವಸ್ಥೆ. ಯಾವುದೇ ಸಂಸ್ಥೆ ತನ್ನ ಸಾಲಗಾರರೊಡನೆ, ಸದಸ್ಯರೊಡನೆ ಮಾಡಿಕೊಳ್ಳುವ ವ್ಯವಸ್ಥೆಗಳು ನ್ಯಾಯಾಲಯದ ಮೂಲಕ ಏರ್ಪಡಬೇಕೆಂದು ಕಂಪನಿ ಕಾನೂನು ತಿಳಿಸುತ್ತದೆ.

**Arrears Certificate :** ಬಾಕಿ ಪ್ರಮಾಣಪತ್ರ. ಸಾಲಪತ್ರ, ಋಣಪತ್ರಗಳಿಗೆ ಅರ್ಧ ವಾರ್ಷಿಕ ಬಡ್ಡಿಯನ್ನು ಪೂರ್ತಿ ಸಲ್ಲಿಸದಿದ್ದಾಗ ಅಥವಾ ಭಾಗಶಃ ಸಲ್ಲಿಸಿದಾಗ ಉಳಿಕೆ ಹಣಕ್ಕೆ ಬಾಕಿ ಪ್ರಮಾಣ ಪತ್ರವನ್ನು ನೀಡಬಹುದು. ಸಂಸ್ಥೆಯ ಭಾವಿ ಲಾಭದಿಂದ ಈ ಬಾಕಿಯು ತೀರುವೆಯಾಗುವುದೆಂದು ಇದರಲ್ಲಿ ನಮೂದಾಗಿರಬಹುದು.

**Articles of Association :** ಸಂಸ್ಥೆಯ ವಿಧಿಗಳು. ಸಂಸ್ಥೆಯ ಕಲಾಪಗಳನ್ನು ಕುರಿತ ನಿಬಂಧನೆಗಳು.

**As Per Advice :** ಸೂಚನೆಯ ಮೇರೆಗೆ. ಈ ಪದಗಳು ಹುಂಡಿ ಪತ್ರದ ಮೇಲೆ ಇದ್ದರೆ ಆ ಹುಂಡಿಯನ್ನು ಸೂಚನಾ ಪತ್ರಕ್ಕನುಗುಣವಾಗಿ ಬರೆದಿದೆ ಎಂದು ಪರಿಗಣಿಸಲಾಗುತ್ತದೆ.

**Assessment of Income-Tax :** ಆದಾಯ ತೆರಿಗೆಯ ನಿರ್ಧಾರಣ.

**Assets :** ಆಸ್ತಿಗಳು.

ಯಾವುದೇ ರೀತಿಯ ಪತ್ರಿಕೆಗಳಿಗೆ ಸಂಪರ್ಕಿಸಿ :

ಶ್ರೀ ವೆಂಕಟೇಶ್ವರ ನ್ಯೂಸ್ ಏಜೆನ್ಸಿ

40, 6ನೇ ಕ್ರಾಸ್, 2ನೇ ಮುಖ್ಯರಸ್ತೆ
ಹೊಂಬೇಗೌಡ ನಗರ
ಬೆಂಗಳೂರು-560 027

## ಕರ್ನಾಟಕದ ವಿಕಾಸ ಹಾಗೂ ಬೆಳವಣಿಗೆಗೆ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಸ್ಥಳೀಯ ಪ್ರಧಾನ ಕಛೇರಿಯೊಂದನ್ನು ಬೆಂಗಳೂರಿನಲ್ಲಿ ತೆರೆಯಬೇಕಾದ ಆವಶ್ಯಕತೆ ಇದೆ.

ಕರ್ನಾಟಕ ರಾಜ್ಯಕ್ಕೆ ಪ್ರತ್ಯೇಕವಾಗಿ ಬೆಂಗಳೂರಿನಲ್ಲಿ ಸ್ಥಳೀಯ ಪ್ರಧಾನ ಕಛೇರಿಯನ್ನು ತೆರೆಯುವುದರಿಂದ ಅನೇಕ ಪ್ರಯೋಜನಗಳು ಲಭಿಸುತ್ತವೆ.

ಅವುಗಳಲ್ಲಿ ಕೆಲವನ್ನು ಹೆಸರಿಸುವೆವು :

(1) ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಹೆಚ್ಚು ಹೆಚ್ಚು ಶಾಖೆಗಳು ಕರ್ನಾಟಕದಲ್ಲಿ ತೆರೆಯಲ್ಪಡುವುವು.

(2) ರಾಜ್ಯದ ದುರ್ಬಲ ಹಾಗೂ ನಿರ್ಲಕ್ಷಿಸಲ್ಪಟ್ಟಿರುವ ಜನಾಂಗಕ್ಕೆ ಹೆಚ್ಚಿನ ಧನ ಸಹಾಯ.

(3) ಸ್ಥಳೀಯರಿಗೆ ಹೆಚ್ಚಿನ ಉದ್ಯೋಗಾವಕಾಶ.

(4) ರಾಜ್ಯದ ಪ್ರತಿ ಜಿಲ್ಲೆಗೂ ಯೋಜಿತ ಆರ್ಥಿಕ ಅವಕಾಶಗಳು.

(5) ಸ್ಥಳೀಯ ಬೇಡಿಕೆಗಳ ಮೇರೆಗೆ ಸಾಲಸೌಲಭ್ಯಗಳು.

(6) ರಾಜ್ಯ ಸರ್ಕಾರದೊಡನೆ ಬ್ಯಾಂಕಿನ ನೇರ ಹಾಗೂ ಸುಲಭ ಸಂಪರ್ಕಾವಕಾಶಗಳು.

(7) ವಿವಿಧ ಕ್ಷೇತ್ರಗಳಲ್ಲಿ ಪರಿಣತಿ ಹೊಂದಿದ ತಜ್ಞರಿಂದ ಕೂಡಿದ 'ಸ್ಥಳೀಯ ಮಂಡಳಿ' ಅಸ್ತಿತ್ವಕ್ಕೆ ಬಂದು ಬ್ಯಾಂಕಿಗೆ ಅಧಿಕಾರಾರೂಢ ಸಲಹಾ ಮಂಡಲಿಯಾಗಿ ಕೆಲಸ ಮಾಡುವುದು.

(8) ಬ್ಯಾಂಕಿನ ಕೇಂದ್ರ ಮಂಡಲಿಯಲ್ಲಿ ರಾಜ್ಯದ ಸ್ಥಳೀಯ ಮಂಡಲಿಯ ಮೂಲಕ ಕಾರ್ಯಸ್ಥಾನ ದೊರಕುವಂತಾಗುವುದು.

(9) ಬೆಂಗಳೂರಿನಲ್ಲಿ ಕರ್ನಾಟಕಕ್ಕೆ ಸೀಮಿತವಿರುವ ಸ್ಟೇಟ್ ಬ್ಯಾಂಕಿನ ಉದ್ಯೋಗ ನೇಮಕಾತಿ ಮಂಡಲಿಯೊಂದನ್ನು ಸ್ಥಾಪಿಸಲಾಗುವುದು.

(10) ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಸ್ಥಳೀಯ ಪ್ರಧಾನ ಕಛೇರಿಯನ್ನು ಬೆಂಗಳೂರಿನಲ್ಲಿ ತೆರೆಯುವುದರಿಂದ ಒಟ್ಟಾರೆ ಕರ್ನಾಟಕದ ಸರ್ವತೋಮುಖ ಬೆಳವಣಿಗೆಗೆ ಭದ್ರ ಬುನಾದಿ ಹಾಕಿದಂತೆ ಆಗುವುದು.

**ಕರ್ನಾಟಕ ವೃತ್ತ ತೆರೆಸಲು**

**ಭಾರತೀಯ ಸ್ಟೇಟ್ ಬ್ಯಾಂಕ್ ಸಿಬ್ಬಂದಿ ಸಮಿತಿ**

ಸ್ಟೇಟ್ ಬ್ಯಾಂಕ್ ಕಟ್ಟಡ, ಸಂತ ಮಾರ್ಕ್ಸ್ ರಸ್ತೆ

ಬೆಂಗಳೂರು-೫೬೦ ೦೦೧

**ಮಕ್ಕಳೇ ರಾಷ್ಟ್ರದ ಸಂಪತ್ತು!**

**ಅವರಿಗೆ ಪುಷ್ಟಿಕರ ಆಹಾರ ಕೊಟ್ಟು ಬೆಳೆಸಿ!!**

## ಕರ್ನಾಟಕದಲ್ಲಿ ಪೌಷ್ಟಿಕ ಆಹಾರ ಕಾರ್ಯಕ್ರಮ

ಎಳೆಯ ವಯಸ್ಸಿನಲ್ಲಿ ಕೊಡುವ ಆಹಾರ ಪುಷ್ಟಿಕರವಾಗಿದ್ದರೆ ಮಕ್ಕಳ ದೈಹಿಕ ಮತ್ತು ಬೌದ್ಧಿಕ ಬೆಳವಣಿಗೆಗೆ ನೆರವಾಗುತ್ತದೆ. ಈ ಕಾರ್ಯಕ್ರಮಕ್ಕಾಗಿ ಸರ್ಕಾರವು ಪ್ರಸಕ್ತ ವರ್ಷ 378.76 ಲಕ್ಷ ರೂಪಾಯಿಗಳನ್ನು ಖರ್ಚು ಮಾಡಲಿದೆ.

ಪೌಷ್ಟಿಕ ಆಹಾರ ಕಾರ್ಯಕ್ರಮವು ಭಾವೀ ಜನಾಂಗವನ್ನು ಸದೃಢವನ್ನಾಗಿ ಮಾಡುವುದರಿಂದ ಶಾಲಾ ಮಕ್ಕಳಿಗೆ ಪೌಷ್ಟಿಕ ಆಹಾರ ನೀಡುವ ಬಗ್ಗೆ ಸರ್ಕಾರವು ವಿಶೇಷ ಗಮನಕೊಟ್ಟಿದೆ.

ಪ್ರಸಕ್ತ ವರ್ಷ ಪ್ರಾಥಮಿಕ ಮತ್ತು ಪ್ರಾಥಮಿಕ ಪೂರ್ವ ಶಾಲೆಯ 2.4 ಲಕ್ಷ ಮಕ್ಕಳಿಗೆ ಮಧ್ಯಾಹ್ನದ ಉಪಹಾರ ನೀಡುವ ಯೋಜನೆಗಾಗಿ 215 ಲಕ್ಷ ರೂಪಾಯಿಗಳನ್ನು ಒದಗಿಸಲಾಗಿದೆ.

ಅನ್ವಯಿಕ ಪೌಷ್ಟಿಕ ಆಹಾರ ಕಾರ್ಯಕ್ರಮವನ್ನು ಮುಂದುವರಿಸುವ ಸಲುವಾಗಿ ಈ ವರ್ಷ 21.75 ಲಕ್ಷ ರೂಪಾಯಿಗಳ ಅವಕಾಶ ಮಾಡಿಕೊಡಲಾಗಿದೆ.

ಉಳಿದ 142 ಲಕ್ಷ ರೂಪಾಯಿಗಳನ್ನು ವಿಶೇಷ ಪೌಷ್ಟಿಕ ಆಹಾರ ಕಾರ್ಯಕ್ರಮಕ್ಕಾಗಿ ಮೀಸಲಾಗಿಡಲಾಗಿದೆ.

ರಾಜ್ಯದಾದ್ಯಂತ ವಿವಿಧ ಜಿಲ್ಲೆಗಳಲ್ಲಿರುವ 20 ಅಭಿವೃದ್ಧಿ ಬ್ಲಾಕುಗಳಲ್ಲಿ ತಲಾ 100 ಅಂಗನವಾಡಿಗಳ ಮೂಲಕ ಮಕ್ಕಳಿಗೆ ಪೌಷ್ಟಿಕ ಆಹಾರವನ್ನು ನೀಡಲಾಗುತ್ತಿದೆ. ಇದರಲ್ಲಿ ಮಕ್ಕಳು ತಾಯಂದಿರು ಹಾಗೂ ಬಾಣಂತಿಯರಿಗೆ ಪೌಷ್ಟಿಕ ಆಹಾರ ಒದಗಿಸಲಾಗುತ್ತಿದೆ.

**ಪ್ರಕಟಣೆ: ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ**

# ಚಂದಾದಾರರಲ್ಲಿ ಮನವಿ

ಬ್ಯಾಂಕಿಂಗ್ ಪ್ರಪಂಚದ ಹಿಂದಿನ ಎರಡೂ ಸಂಚಿಕೆಗಳು ನಿಮಗೆ ತಲುಪಿವೆ ಎಂದು ತಿಳಿಯುತ್ತೇವೆ. ಯಾವುದೇ ಸಂಚಿಕೆ ತಲುಪದಿದ್ದಲ್ಲಿ ತತ್‌ಕ್ಷಣ ಬರೆಯಿರಿ.

ಬ್ಯಾಂಕಿಂಗ್ ಪ್ರಪಂಚ ಎರಡನೆಯ ವರ್ಷಕ್ಕೆ ಕಾಲಿರಿಸಿ ಮೂರನೆಯ ಸಂಚಿಕೆ ಬಿಡುಗಡೆಯಾಗಿದೆ. ೧೯೮೧ನೆಯ ಸಾಲಿನ ಚಂದಾವನ್ನು ನವೀಕರಿಸಬೇಕಾಗಿ ವಿನಂತಿ. ಈ ವರ್ಷಕ್ಕೂ ರೂ. ೫ನ್ನು (ರೂ. ಐದು ಮಾತ್ರ) ಚಂದಾವಾಗಿ ಮುಂದು ವರಿಸಿದ್ದೇವೆ. ದಯವಿಟ್ಟು ಚಂದಾವನ್ನು 'ಸಮನ್ವಯ ಸಮಿತಿ'ಯ ಹೆಸರಿಗೆ ಕಳುಹಿಸಿ.

ಚಂದಾದಾರರ ಸಂಖ್ಯೆ ಗಮನೀಯವಾಗಿ ಹೆಚ್ಚದಿದ್ದಲ್ಲಿ ಪತ್ರಿಕೆಯ ಬೆಲೆ ಏರಿಸುವುದು ಅನಿವಾರ್ಯವಾಗುತ್ತದೆ. ಆದ್ದರಿಂದ ತಾವು ತಮ್ಮ ಗೆಳೆಯರನ್ನು ಬ್ಯಾಂಕಿಂಗ್ ಪ್ರಪಂಚಕ್ಕೆ ಚಂದಾದಾರರಾಗಿ ನೋಂದಾಯಿಸಿ ನಮ್ಮ ಈ ಪ್ರಯತ್ನಕ್ಕೆ ಪ್ರೋತ್ಸಾಹ ನೀಡಬೇಕೆಂದು ಕೋರುತ್ತೇವೆ.

**ಪ್ರಧಾನ ಕಾರ್ಯದರ್ಶಿ**
**ಸಮನ್ವಯ ಸಮಿತಿ**

---

ವಿಳಾಸ:

ನಾನು 'ಬ್ಯಾಂಕಿಂಗ್ ಪ್ರಪಂಚ'ಕ್ಕೆ ಆಜೀವ/ವಾರ್ಷಿಕ ಚಂದಾದಾರನಾಗಲು ಬಯಸುತ್ತೇನೆ. ಆಜೀವ ಚಂದಾ ರೂ. 100ನ್ನು/ಮೊದಲ ಕಂತಾಗಿ ರೂ. ......ನ್ನು/ವಾರ್ಷಿಕ ಚಂದಾ ರೂ. 5ನ್ನು ಇದರೊಂದಿಗೆ ಕಳುಹಿಸಿದ್ದೇನೆ.

ದಿನಾಂಕ............... ಸಹಿ

ಪ್ರಧಾನ ಕಾರ್ಯದರ್ಶಿಗೆ,

ಸಮನ್ವಯ ಸಮಿತಿ (ರಿ)
(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು), ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ, 33, ಜಯಚಾಮ ರಾಜ ಒಡೆಯರ್ ರಸ್ತೆ,
ಬೆಂಗಳೂರು-560 002.

## ನಮೂನೆ IV
(ನಿಯಮ 8ನ್ನು ನೋಡಿ)

| | | | |
|---|---|---|---|
| 1 | ಪ್ರಕಟಣೆಯ ಸ್ಥಳ | .. | ಬೆಂಗಳೂರು 560 002 |
| 2 | ನಿಯತಕಾಲಿಕದ ಅವಧಿ | .. | ಅರ್ಧವಾರ್ಷಿಕ |
| 3 | ಮುದ್ರಕರ ಹೆಸರು | .. | ಶ್ರೀ ಎಂ. ಎಸ್. ಚಿಂತಾಮಣಿ |
| | ರಾಷ್ಟ್ರೀಯತೆ | .. | ಭಾರತೀಯ |
| | ವಿಳಾಸ | .. | ಈಸ್ಟರ್ನ್ ಪ್ರೆಸ್<br>ಮೊರ್ಜಾರಿಯಾ ಇಂಡಸ್ಟ್ರಿಯಲ್ ಎಸ್ಟೇಟ್<br>ಬನ್ನೇರುಘಟ್ಟ ರಸ್ತೆ, ಬೆಂಗಳೂರು 560 029 |
| 4 | ಪ್ರಕಾಶಕರ ಹೆಸರು | .. | ಶ್ರೀ ಚೋ. ನಂಜಪ್ಪ |
| | ರಾಷ್ಟ್ರೀಯತೆ | .. | ಭಾರತೀಯ |
| | ವಿಳಾಸ | .. | ಪ್ರಧಾನ ಕಾರ್ಯದರ್ಶಿ, ಸಮನ್ವಯ ಸಮಿತಿ<br>(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)<br>ಭಾರತೀಯ ಸ್ಟೇಟ್ ಬ್ಯಾಂಕ್, 22, ಜಯಚಾಮರಾಜ<br>ಒಡೆಯರ್ ರಸ್ತೆ, ಬೆಂಗಳೂರು 560 002 |
| 5 | ಸಂಪಾದಕರ ಹೆಸರು | .. | ಶ್ರೀ ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ (ಎಚ್ಚೆಸ್ಕೆ) |
| | ರಾಷ್ಟ್ರೀಯತೆ | .. | ಭಾರತೀಯ |
| | ವಿಳಾಸ | .. | 41, 6ನೆಯ ಮುಖ್ಯ ರಸ್ತೆ, ಸರಸ್ವತೀಪುರಂ<br>ಮೈಸೂರು 570 009 |
| 6 | ಒಟ್ಟು ಬಂಡವಾಳದ ಸೇ. 1ಕ್ಕಿಂತ ಹೆಚ್ಚಿನ ಷೇರುಗಳನ್ನು ಹೊಂದಿರುವ ಷೇರುದಾರರ ಅಥವಾ ಪಾಲುದಾರರ ಮತ್ತು ಪತ್ರಿಕೆಯ ಮಾಲೀಕರ ಹೆಸರು, ವಿಳಾಸಗಳು | | ಸಮನ್ವಯ ಸಮಿತಿ (ರಿ.)<br>(ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)<br>ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ<br>22, ಜಯಚಾಮರಾಜ ಒಡೆಯರ್ ರಸ್ತೆ<br>ಬೆಂಗಳೂರು 560 002 |

ನಾನು, ಚೋ. ನಂಜಪ್ಪ, ಮೇಲ್ಕಾಣಿಸಿದ ವಿವರಗಳು ನನ್ನ ನಂಬಿಕೆ ಮತ್ತು ತಿಳಿವಳಿಕೆಯಂತೆ ನಿಜವಾದುವೆಂದು ಈ ಮೂಲಕ ಘೋಷಿಸುತ್ತೇನೆ.

ಸಹಿ: **ಚೋ. ನಂಜಪ್ಪ**
ಪ್ರಕಾಶಕನ ರುಜು


ಓದಿ

# ಗ್ರಂಥಲೋಕ

**ಪುಸ್ತಕೋದ್ಯಮಕ್ಕೆ ಮೀಸಲಾದ ಮಾಸಪತ್ರಿಕೆ**

ಸಂಪಾದಕರು : **ಆರ್. ಎಲ್. ಅನಂತರಾಮಯ್ಯ** ವಾರ್ಷಿಕ ಚಂದಾ ರೂ. ೫/-

ಪ್ರತಿಗಳಿಗೆ ಬರೆಯಿರಿ :
49, 'ಅಕ್ಷಯ', ತೊಣಚಿ ಕೊಪ್ಪಲು ಬಡಾವಣೆ, ಸರಸ್ವತೀಪುರಂ
ಮೈಸೂರು 570 009

## ಕರ್ನಾಟಕದ ಭಾವೀ ಕೈಗಾರಿಕೋದ್ಯಮಿಗಳಿಗೆ

# ಕೆ. ಎಸ್. ಎಫ್. ಸಿ. ಯ

## ಸ್ವಾಗತ

ಕರ್ನಾಟಕದಲ್ಲಿ ಎಲ್ಲೇ ಇರಲಿ, ಎಷ್ಟೇ ಸಣ್ಣದಿರಲಿ, ನಿಮ್ಮ ಕೈಗಾರಿಕಾ ಯೋಜನೆಗಳಿಗೆ ಹಣ ಸಹಾಯ ಕೆ.ಎಸ್.ಎಫ್.ಸಿ.ಯಿಂದ ದೊರೆಯುತ್ತದೆ. ಹಣವಿಲ್ಲದೆ ನಿಮ್ಮ ಯೋಜನೆಗಳು ಮೂಲೆ ಸೇರಬೇಕಿಲ್ಲ. ನಿಮ್ಮ ಅವಶ್ಯಕತೆಗಳಿಗೆ ಸರಿಹೊಂದುವಂತೆ ರೂಪಿಸಿದ ಹಣಸಹಾಯದ ಹಲವಾರು ವಿಧಾನಗಳು ನಮ್ಮಲ್ಲಿವೆ. ನಿಮ್ಮ ಯೋಜನೆಗಳೊಂದಿಗೆ ನಮ್ಮಲ್ಲಿಗೆ ಬನ್ನಿ—

ನಿಮಗೆ ಸದಾ ಸ್ವಾಗತ.

ಕಡಿಮೆ ಬಡ್ಡಿ ದರಗಳಲ್ಲಿ ಮೂವತ್ತು ಲಕ್ಷ ರೂ.ಗಳ ವರೆಗಿನ ಸಾಲ ನಿಮಗೆ ದೊರೆಯುತ್ತದೆ. ಕಡಿಮೆ ಆಧಾರದ ಮಿತಿ, ಸುಲಭ ಷರತ್ತುಗಳು, ಅದರಲ್ಲೂ ಕೈಗಾರಿಕೆಯಲ್ಲಿ ಹಿಂದುಳಿದ ಜಿಲ್ಲೆಗಳಲ್ಲಿ ಸ್ಥಾಪಿಸಲಾಗುವ ಯೋಜನೆಗಳಿಗೆ ವಿಶೇಷ ಪ್ರೋತ್ಸಾಹ. ನಮ್ಮ ಹಲವಾರು ನೆರವಿನ ಯೋಜನೆಗಳಲ್ಲಿ ಒಂದಾದರೂ ನಿಮ್ಮ ಅಗತ್ಯಕ್ಕೆ ಸರಿಹೊಂದಬಹುದು.

ಹೆಚ್ಚಿನ ವಿವರಗಳನ್ನು ಇವರಿಂದ ಪಡೆಯಿರಿ :



ಉಪ ವ್ಯವಸ್ಥಾಪಕರು (ಉದ್ಯಮಿಗಳ ಮಾರ್ಗದರ್ಶನ)

**ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ**

25, ಮಹಾತ್ಮ ಗಾಂಧಿ ರಸ್ತೆ

ಬೆಂಗಳೂರು-560 001

ಪ್ರಾದೇಶಿಕ ಕಛೇರಿಗಳು :
ಹುಬ್ಬಳ್ಳಿ, ಬೆಳಗಾವಿ, ಶಿವಮೊಗ್ಗ, ಬಿಜಾಪುರ ಮತ್ತು ಬಿದರೆ

ಶಾಖೆಗಳು :
ಮೈಸೂರು, ಮಂಗಳೂರು ಮತ್ತು ರಾಯಚೂರು

No MAG (2) PRB. DECL. 155/80-81

Save in
CANARA BANK'S
**Kamadhenu** DEPOSIT SCHEME

- *An investment to fulfil your dreams.*

KAMADHENU

Be it owning a house or car or meeting any special large expenses like your daughter's wedding or a holiday tour.

Start a Kamadhenu Deposit account today. Your money will earn a higher interest since it will be compounded quarterly.

Contact our nearest branch for details

*Our other Special Deposit Schemes*

**Nirantara**
**VidyaNidhi**
**Balakshema**




CANARA BANK
(a nationalised Bank)

**MORE THAN 1275 BRANCHES ALL OVER THE COUNTRY**

ARTEC

Eastern Press Bangalore 560 029